# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೯
ಸಂಚಿಕೆ ೩

ಸೆಪ್ಟೆಂಬರ್
೧೯೮೮

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೯ | ಸೆಪ್ಟೆಂಬರ್ ೧೯೮೮ | ಸಂಚಿಕೆ ೩



# ಸಂಪಾದಕೀಯ

## ಸಮನ್ವಯ ಸಮಿತಿ

ಈ ನವೆಂಬರ್ ಎಂಟರಂದು ಸಮನ್ವಯ ಸಮಿತಿಗೆ ಹತ್ತು ವರ್ಷ ತುಂಬಿ ಅದು ಹನ್ನೊಂದನೆಯ ವರ್ಷದಲ್ಲಿ ಕಾಲಿಕ್ಕುತ್ತದೆ. ಒಂದು ಸಂಸ್ಥೆಯ ಬದುಕಿನಲ್ಲಿ ಹತ್ತು ವರ್ಷ ಹೆಚ್ಚೇನೂ ಅಲ್ಲ ಎಂಬುದು ಇಂಥ ಸಂದರ್ಭದಲ್ಲೆಲ್ಲ ಸಾಮಾನ್ಯವಾಗಿ ಹೇಳುವ ಮಾತು. ಇದು ಈಗ ಒಂದು ಕ್ಲೀಷೆಯಾಗಿಬಿಟ್ಟಿದೆ. ಆದರೂ ಈ ಮಾತಿನಿಂದಲೇ ಆರಂಭಿಸುವುದು ಸುಲಭ. ಇದು ಮುಂದಿನ ಮಾತುಗಳಿಗೆ ಒಂದು ಚಿಮ್ಮುಹಲಗೆ.

ವ್ಯಕ್ತಿಯ ಮತ್ತು ಸಂಸ್ಥೆಯ ಹೋಲಿಕೆಯನ್ನೇ ಮುಂದುವರಿಸೋಣ. ಎರಡರ ಬದುಕುಗಳಲ್ಲೂ ಹುಟ್ಟುಹಬ್ಬದ ದಿನ ಸಂತೋಷದ ಸಂದರ್ಭ. ಆದರೆ ಇವೆರಡಕ್ಕೂ ಒಂದು ಮುಖ್ಯ ವ್ಯತ್ಯಾಸ ಇದೆ. ವ್ಯಕ್ತಿಯ ಆಯುಸ್ಸು ಸೀಮಿತ. ಅವನ ಸಾವು ನಿಶ್ಚಿತ. 'ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ.' ಇಡಿಯ ಬದುಕೇ ಸಾವಿನೆಡೆಗೆ ನಿಲ್ಲದೆ ನಡೆದ ಪ್ರಯಾಣ. ವ್ಯಕ್ತಿಗೆ ಒಂದೊಂದು ವರ್ಷ ತುಂಬಿದಾಗಲೂ ಅಷ್ಟಷ್ಟು ಮಟ್ಟಿಗೆ ಸಾವಿಗೆ ಹತ್ತಿರ. ಆದ್ದರಿಂದ ಹುಟ್ಟುಹಬ್ಬದ ಸಂತೋಷ ಸಂಭ್ರಮಗಳ ಅಂಚಿನಲ್ಲೇ ನೋವೂ ಇಣಕುಹಾಕುತ್ತಿರುತ್ತದೆ. ಆದರೆ ನಡೆದುಬಂದ ಹಾದಿಯಲ್ಲಿ ಸಾರ್ಥಕವಾದ್ದೇನನ್ನಾದರೂ ಮಾಡಿದ್ದರೆ ಮಾತ್ರ ಅಂಥ ವ್ಯಕ್ತಿ ಸಮಾಧಾನದ ನಿಟ್ಟುಸಿರು ಬಿಡಬಹುದಾಗುತ್ತದೆ. ತನ್ನನ್ನೂ ದಾಟಿ ಈ ಕೆಲಸ ನಿಲ್ಲುವುದೆಂಬುದರಿಂದ ಅವನು ಸ್ವಲ್ಪ ನೆಮ್ಮದಿ ಪಡೆದುಕೊಳ್ಳುವಂತಾಗುತ್ತದೆ.

ಸಂಸ್ಥೆಯ ಬದುಕು ಸೀಮಿತವಾಗಬೇಕಾದ್ದಿಲ್ಲ. ಅದರ ಉದ್ದೇಶದ ಪೂರೈಕೆಯ ಅಗತ್ಯ ಎಲ್ಲಿಯ ವರೆಗೆ ಇರುತ್ತದೋ ಅಲ್ಲಿಯ ವರೆಗೆ ಅದು ಜೀವಂತವಾಗಿ ಉಳಿದು ಬೆಳೆಯುವುದು ಅಗತ್ಯವೆನಿಸುತ್ತದೆ. ವ್ಯಕ್ತಿಯ ದೇಹದ ಜೀವಕಣಗಳ ನವೀಕರಣ ಪ್ರಕ್ರಿಯೆ ಸ್ವಲ್ಪಕಾಲದ ಮೇಲೆ ನಿಂತುಹೋಗುತ್ತದೆ. ಆಗ ಸಾವಿನೆಡೆಗೆ ಜಾರಿಕೆ ಆರಂಭವಾಗುತ್ತದೆ. ಸಂಸ್ಥೆಯ ಶರೀರದ ಜೀವಕಣಗಳೆಂದರೆ ಅದರ ಸದಸ್ಯ ಸಂಪತ್ತು. ಈ ಜೀವಕಣಗಳ ನವೀಕರಣ ಪ್ರಕ್ರಿಯೆಗೆ ನಿಲುಗಡೆ ಇರಬೇಕಾದುದಿಲ್ಲ. ಈ ಪ್ರಕ್ರಿಯೆ ನಿರಂತರವಾಗಿ ನಡೆದುಕೊಂಡು ಹೋಗುವಂತೆ ಯಾವ ಸಂಸ್ಥೆ ಎಚ್ಚರ ವಹಿಸುತ್ತದೋ ಅದು ಅನಂತ ಕಾಲದ ವರೆಗೂ ಜೀವಂತವಾಗಿರಬಹುದು. ಆದರೆ ಆಂತರಿಕ ವೈರುದ್ಧ್ಯಗಳು ಅದರ ಬದುಕನ್ನು ಮೊಟಕು ಮಾಡಬಹುದು. ಉತ್ಕರ್ಷೆಯ ಬಲಗಳೇ ಅವನತಿಗೆ ಹಾದಿ ಮಾಡಬಹುದು. ಆದ್ದರಿಂದ ಹೀಗಾಗದಂತೆ ಎಚ್ಚರ ವಹಿಸುವುದೂ ಅಗತ್ಯವಾಗುತ್ತದೆ. ಸಂಸ್ಥೆಯನ್ನು ದೃಢವಾಗಿ ಕಟ್ಟಿ ಬೆಳೆಸುವುದಕ್ಕೆ ಬೇಕಾಗುವ ಅಂಶಗಳೇ ಅದಕ್ಕೆ ಜಡತ್ವವನ್ನೂ ಜರತ್ವವನ್ನೂ ಮರಣತ್ವವನ್ನೂ ತರಬಹುದು. ಭದ್ರತೆ, ಉದ್ದೇಶದ ಮಸುಳಿಕೆ, ಸಂಸ್ಥೆಯಿಂದ ಲಾಭ ಪಡೆಯಬಹುದೆಂದು ಅಧಿಕಾರಾಭಿಲಾಷಿಗಳ ಅನಿಸಿಕೆ—ಇಂಥ ಯಾವುದೇ ಅಥವಾ ಯಾವುವೇ ಕಾರಣ ಅಥವಾ ಕಾರಣಗಳಿಂದಾಗಿ ಸಂಸ್ಥೆ ಇಳಿಮೆಯ ಹಾದಿ ಹಿಡಿಯಬಹುದು. ಯಾವುದೇ ಸಂಸ್ಥೆಗೆ ಅತೀವ ಭದ್ರತೆ ಬರಬಾರದೆಂದು ಗಾಂಧೀಜಿ ಹೇಳುತ್ತಿದ್ದರು. ಸಾಂಸ್ಥೀಕರಣದ ವಿರುದ್ಧ ಅವರು ಸೊಲ್ಲೆತ್ತಿದ್ದರು. ಅವರ ಸಾವಿನ ಅನಂತರ ಗಾಂಧೀವಾದವೇ ಒಂದು ಸಂಸ್ಥೆಯಾಗಿಬಿಟ್ಟಿದ್ದು ಅದರ ಜೀವಂತಿಕೆಯ ನಷ್ಟಕ್ಕೆ ಕಾರಣವಾಯಿತೋ ಏನೋ.

## ಸ್ಥಾಪನೆಯ ಉದ್ದೇಶ

ಹತ್ತು ವರ್ಷಗಳ ಹಿಂದೆ ಸಮನ್ವಯ ಸಮಿತಿಯ ಸ್ಥಾಪನೆಯಾದಾಗ ಅದಕ್ಕೆ ಒಕದು ಗುರಿ ಇತ್ತು. ಭಾರತೀಯ ಸ್ಟೇಟ್ ಬ್ಯಾಂಕಿನ ಹಲವು ಶಾಖೆಗಳಲ್ಲಿ ಆರಂಭವಾದ ಕನ್ನಡ ಸಂಘಗಳು ತಮತಮಗೆ ತೋರಿದಂತೆ ಕನ್ನಡದ ಕೆಲಸ ನಡಸುತ್ತಿದ್ದುವು. 'ತಮತಮಗೆ ತೋರಿದಂತೆ' ಎಂಬ ಮಾತನ್ನು ಇಲ್ಲಿ

ಕೆಟ್ಟ ಅರ್ಥದಲ್ಲಿ ಬಳಸಿಲ್ಲ. ಅವೆಲ್ಲ ಒಳ್ಳೆಯ ಕೆಲಸವನ್ನೇ ಮಾಡುತ್ತಿದ್ದುವು. ಆದರೆ ಕನ್ನಡದ ಅಭಿಮಾನ ಹೊಂದಿದವರ ಮಿತವಾದ ಸಾಮರ್ಥ್ಯ ಹಾಗೂ ಸಾಧನ ಸಂಪತ್ತುಗಳನ್ನು ಅನುಕೂಲತಮ ರೀತಿಯಲ್ಲಿ ಬಳಸಿಕೊಳ್ಳುವಂತಾಗಲು, ಪ್ರತಿಕೂಲ ಪರಿಸರದಲ್ಲಿ ಕನ್ನಡದ ಹಣತೆ ಆರದೆ ದೃಢವಾಗಿ ಬೆಳಗುವಂತಾಗಲು ಈ ಎಲ್ಲ ಕೆಲಸವನ್ನು ಕ್ರೋಢೀಕರಿಸುವ, ಒಂದು ವ್ಯವಸ್ಥೆಗೆ ಒಳಪಡಿಸುವ, ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಕನ್ನಡವನ್ನು ನೆಲೆಗೊಳಿಸುವ ಕಾರ್ಯವನ್ನು ಸುಸೂತ್ರಗೊಳಿಸುವ ಉದ್ದೇಶದಿಂದ ಆ ಕಾರ್ಯಕರ್ತರು ಹಿಂದೆಡೆ ಸೇರಿ ಸಮನ್ವಯ ಸಮಿತಿಯನ್ನು ಸ್ಥಾಪಿಸಿದರು. ಕನ್ನಡ ಪತ್ರಿಕೆಗಳನ್ನು ತರಿಸುವುದು, ವಾಚನಾಲಯ ನಡೆಸುವುದು, ಗ್ರಂಥಾಲಯ ಸ್ಥಾಪಿಸಿ ನಿರ್ವಹಿಸುವುದು, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಮುಂತಾದವೆಲ್ಲ ಕನ್ನಡದ ಅಭಿಮಾನವನ್ನು ಬೆಳೆಸುವುದೆಂಬುದು ನಿಜ. ಆದರೆ ಅವುಗಳ ಚಟುವಟಿಕೆಗಳು ಇಷ್ಟಕ್ಕೇ ನಿಲ್ಲಬಾರದು. ಬ್ಯಾಂಕುಗಳು ಸಾರ್ವಜನಿಕರಿಗಾಗಿ ಇರುವ ಸೇವಾ ಸಂಸ್ಥೆಗಳು. ಈ ಸಂಸ್ಥೆಗಳ ವ್ಯವಹಾರ ಸಾರ್ವಜನಿಕರ ಭಾಷೆಯಲ್ಲಿ ನಡೆಯಬೇಕು. ಇದನ್ನು ಬ್ಯಾಂಕ್ ವ್ಯವಸ್ಥಾಪಕ ವರ್ಗಕ್ಕೂ ಗ್ರಾಹಕ ವರ್ಗಕ್ಕೂ ಸರ್ಕಾರಕ್ಕೂ ಮನವರಿಕೆ ಮಾಡಿಕೊಡಬೇಕು. ಸಮಗ್ರತೆಯ, ಒಗ್ಗಟ್ಟಿನ ಅನುಕೂಲತೆಯ ಹೆಸರಿನಲ್ಲಿ ಜನದ್ದಲ್ಲದ ಯಾವುದೇ ಭಾಷೆಯನ್ನು ಹೇರುವ ಪ್ರಯತ್ನವನ್ನು ತಡೆಗಟ್ಟಬೇಕು. ಬ್ಯಾಂಕುಗಳಿಗೆ ಕೇಂದ್ರ ಕಛೇರಿಗಳು ಇರುವುದು ನಿಜ. ಅವುಗಳ ಮೇಲೆ ರಿಸರ್ವ್ ಬ್ಯಾಂಕೂ ಸರ್ಕಾರವೂ ಇರುವುದೆಂಬುದನ್ನೂ ಅಲ್ಲಗಳೆಯುವಂತಿಲ್ಲ. ಭಾರತೀಯ ಬ್ಯಾಂಕುಗಳ ಸಂಘವಿರುವುದೂ ಸತ್ಯಸಂಗತಿ. ಇವೆಲ್ಲ ಅತಿ ಕೇಂದ್ರೀಕರಣದ, ಸಾಂದ್ರೀಕರಣದ ಸಾಧನಗಳು. ಸಂಘಟನೆ, ದಕ್ಷತೆ, ಏಕರೂಪತೆ, ಯುಕ್ತ ನೀತಿನಿರೂಪಣೆ—ಇವುಗಳ ದೃಷ್ಟಿಯಿಂದ ಇವು ಅಗತ್ಯವಿರಬಹುದು. ಆದರೆ ಇಡೀ ಬ್ಯಾಂಕಿಂಗ್ ವ್ಯವಸ್ಥೆ ಪಿರಮಿಡಿನಂತೆ. ತಳದಲ್ಲಿ – ಶಾಖೆಗಳ ಮಟ್ಟದಲ್ಲಿ – ನಡೆಯುವ ವ್ಯವಹಾರಗಳೇ ಅದಕ್ಕೆ ಆಧಾರ. ಈ ವ್ಯವಹಾರಗಳು ಮೇಲಿನ ಆಡಳಿತಗಾರರಿಗೆ ಅರ್ಥವಾಗಬೇಕು ಎಂಬುದಕ್ಕಿಂತ, ಯಾರು ವ್ಯವಹಾರ ನಡೆಸುತ್ತಾರೋ ಅವರಿಗೆ ಅರ್ಥವಾಗಬೇಕು ಎಂಬುದು ಮುಖ್ಯ. ಮೇಲಿನವರು ಪ್ರಯತ್ನಪಟ್ಟು ಅರ್ಥಮಾಡಿಕೊಳ್ಳಬಲ್ಲರು. ಕೆಳಗಿನ ಸ್ತರಗಳವರು—ಬ್ಯಾಂಕುಗಳ ಜೀವನಾಡಿಗಳಾದ ಗ್ರಾಹಕರು— ತಮ್ಮದಲ್ಲದ ಭಾಷೆಯನ್ನು ಅರ್ಥಮಾಡಿಕೊಳ್ಳಲಾರರು. ಸೇವಾಸಂಸ್ಥೆಗಳೆಂದು ಕರೆದುಕೊಳ್ಳುವ ಬ್ಯಾಂಕುಗಳ ತಲೆಯಾಳುಗಳೂ ಶಿರಪ್ರಾಯ ಸಂಸ್ಥೆಗಳೂ ಸರ್ಕಾರವೂ ಇದನ್ನರ್ಥಮಾಡಿಕೊಳ್ಳದಿರುವುದು ದುರ್ದೈವದ ಸಂಗತಿ. ಇದು ಮಹಾಪರಾಧ. ಆದ್ದರಿಂದ ಸಮನ್ವಯ ಸಮಿತಿಯ ನಿರ್ದೇಶನದಲ್ಲಿ ಕನ್ನಡ ಸಂಘಗಳು ಈ ಪರಿಸ್ಥಿತಿಯನ್ನು ನಿವಾರಿಸಲು ಕ್ರಮ ಕೈಗೊಳ್ಳಬೇಕು. ಈ ನಿಟ್ಟಿನಲ್ಲಿ ಕಲಾಪಗಳನ್ನು ನಡೆಸಬೇಕು ಎಂಬುದು ಸ್ಥೂಲವಾಗಿ ಸಮನ್ವಯ ಸಮಿತಿಯ ಸ್ಥಾಪನೆಯ ಹಿಂದಿದ್ದ ಉದ್ದೇಶ ಎನ್ನಬಹುದು.

## ದ್ವಿಮುಖ ಕಾರ್ಯ

ಸಮನ್ವಯ ಸಮಿತಿ ಸಹಜವಾಗಿಯೇ ತನ್ನ ಕಲಾಪಗಳನ್ನು ಎರಡು ದಿಕ್ಕುಗಳಲ್ಲಿ ರೂಪಿಸುವುದು ಅಗತ್ಯವಾಯಿತು. ಮೊದಲನೆಯದಾಗಿ ಬ್ಯಾಂಕಿನ ವಿವಿಧ ಶಾಖೆಗಳಲ್ಲಿ ಕನ್ನಡ ಸಂಘಗಳ ಸ್ಥಾಪನೆಗೆ ನೆರವಾಗಿ, ಅಲ್ಲೆಲ್ಲ ಕನ್ನಡ ವಾತಾವರಣ ಮೂಡುವಂತೆ ಮಾಡಿ, ಕನ್ನಡದ ಬಗ್ಗೆ ಇರುವ ವಿರೋಧ, ತಾತ್ಸಾರ, ಅಜ್ಞಾನಗಳ ನಿವಾರಣೆಗಾಗಿ ಶ್ರಮಿಸುವುದು ; ಇಂಗ್ಲಿಷಿನ ಸ್ಥಾನದಲ್ಲಿ ಶೀಘ್ರಾತಿಶೀಘ್ರವಾಗಿ ಹಿಂದಿಯನ್ನು ತಂದು ಹೇರಿ ಒಂದು ಅಪರಿಚಿತ ಭಾಷೆಯ ಬದಲು ಇನ್ನೊಂದು ಅಪರಿಚಿತ ಭಾಷೆಯನ್ನು ಸ್ಥಾಪಿಸುವವರ ಪ್ರಯತ್ನವನ್ನು ವಿರೋಧಿಸಿ, ಜನರು ಆಡುವ ಭಾಷೆಯಲ್ಲಿ ವ್ಯವಹರಿಸುವುದು ಸಹಜವೂ ಪ್ರಜಾಸತ್ತಾತ್ಮಕವೂ ಆಗಿರುವುದಲ್ಲದೆ, ಸಮಗ್ರತೆಗೆ ಹಾನಿಕಾರಕವಲ್ಲವೆಂದೂ ಪ್ರತಿಯಾಗಿ ಅದಕ್ಕೆ ಪೋಷಕವೆಂದೂ ತೋರಿಸಿಕೊಡುವುದು. ಇದು ಒಂದು ರೀತಿಯಲ್ಲಿ ಹೋರಾಟದ ಮುಖ.

ಎರಡನೆಯದಾಗಿ ರಚನಾತ್ಮಕ ಕಾರ್ಯ. ಬ್ಯಾಂಕುಗಳು ಕನ್ನಡದಲ್ಲಿ ವ್ಯವಹಾರ ಮಾಡುವುದು ಸುಲಭಸಾಧ್ಯವಾಗುವಂತೆ ಕನ್ನಡವನ್ನು ಅದಕ್ಕಾಗಿ ಅನುಗೊಳಿಸುವುದು ; ಇಂಗ್ಲಿಷಿನಲ್ಲಿರುವ ಬ್ಯಾಂಕಿಂಗ್ ಪರಿಕಲ್ಪನೆಗಳನ್ನು ಕನ್ನಡದಲ್ಲಿ ಅಭಿವ್ಯಕ್ತಿಸುವುದು; ಕನ್ನಡದಲ್ಲಿ ಚಿಂತನೆ, ಭಾಷಣ, ಬರವಣಿಗೆ : ಒಟ್ಟಿನಲ್ಲಿ ಕನ್ನಡದಲ್ಲಿ ಬ್ಯಾಂಕಿಂಗ್ ಸಾಹಿತ್ಯ ಸೃಷ್ಟಿ, ಪರಿಭಾಷೆಯ ಸೃಷ್ಟಿ. ಹೋರಾಟಕ್ಕೆ ದಿಟ್ಟ ತಂಡದ ಅಗತ್ಯವಾಗಿರುವಂತೆ, ಬ್ಯಾಂಕಿಂಗ್ ಸಾಹಿತ್ಯ ರಚನೆಗೂ ಸಮರ್ಥರ ತಂಡ ಅಗತ್ಯ. ಈ ಸಾಹಿತ್ಯ ಸೃಷ್ಟಿ ಬ್ಯಾಂಕಿಂಗ್ ಪರಿಸರದಲ್ಲೇ, ಅದರ ವ್ಯವಸ್ಥೆಯ ಒಳಗಿನಿಂದಲೇ ಬರಬೇಕು. ಇದಕ್ಕೆ ಒಂದು ಮಾಧ್ಯಮವೂ ಬೇಕು. ಈ ದೃಷ್ಟಿಯಿಂದ ಎಂಟು ವರ್ಷ ಹಿಂದೆ 'ಬ್ಯಾಂಕಿಂಗ್ ಪ್ರಪಂಚ'ವನ್ನು ಹುಟ್ಟುಹಾಕಲಾಯಿತು. ಅರ್ಧವಾರ್ಷಿಕೆಯಾಗಿ ಆರಂಭವಾದ ಈ ಪತ್ರಿಕೆ ಈಗ ತ್ರೈಮಾಸಿಕವಾಗಿರುವುದು ಓದುಗರಿಗೆ ಗೊತ್ತಿರುವ ಸಂಗತಿ. ಪ್ರತಿ ಆರು ತಿಂಗಳಿಗೆ ಒಮ್ಮೆ ಒಂದೊಂದು ಜಿಲ್ಲೆಯ ಸ್ಥಳದಲ್ಲಿ ನಡೆಸುತ್ತಿರುವ ಬ್ಯಾಂಕಿಂಗ್ ಕಮ್ಮಟ ಬ್ಯಾಂಕಿಂಗ್ ಸಾಹಿತ್ಯ ಸೃಷ್ಟಿಯಲ್ಲೂ ಪರಿಭಾಷೆಯ ಸೃಷ್ಟಿಯಲ್ಲೂ ನೆರವಾಗಿರುವಂತೆ, 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಸಾಮಗ್ರಿ ಒದಗಿಸುವ ಸಾಧನವೂ ಆಗಿದೆ. 'ಬ್ಯಾಂಕಿಂಗ್ ನಿಘಂಟು' ಈ ಕಮ್ಮಟದ ಒಂದು ಮುಖ್ಯ ಉಪೋತ್ಪನ್ನ. ಸಮನ್ವಯ ಸಮಿತಿ ಆಗಾಗ ಏರ್ಪಡಿಸುತ್ತಿರುವ ವಿಚಾರಸಂಕಿರಣಗಳೂ ಭಾಷಣ ಮಾಲೆಗಳೂ ಈ ಉದ್ದೇಶವನ್ನು ಪೂರೈಸಲು ಯತ್ನಿಸುತ್ತಿವೆ.

## ಉದ್ದೇಶ ಪೂರೈಸಿಲ್ಲ

ಸಮನ್ವಯ ಸಮಿತಿ ಸಮಾಧಾನಪಟ್ಟುಕೊಳ್ಳುವಷ್ಟು ಕೆಲಸ ಮಾಡಿದೆಯೆಂದು ಹೇಳುವುದರಲ್ಲಿ ತಪ್ಪಾಗದು. ಬ್ಯಾಂಕಿಂಗ್ ಕಮ್ಮಟ, ಬ್ಯಾಂಕಿಂಗ್ ಪ್ರಪಂಚ', ಬ್ಯಾಂಕಿಂಗ್ ನಿಘಂಟು—ಇವು ಭಾರತದ ಬೇರೆ ಯಾವ ಭಾಷೆಯಲ್ಲೂ ಆಗಿಲ್ಲವೆಂದು ಅದು ಹೆಮ್ಮೆಪಟ್ಟುಕೊಳ್ಳಲೂಬಹುದು. ಆದರೆ ಪ್ರಭುತ್ವದ ದೈತ್ಯಬಲದ ನೆರವಿನಿಂದ, ರಾಜ್ಯ ಸರ್ಕಾರದ ನಿರ್ವೀರ್ಯತೆ ನಿರಾಸಕ್ತಿಗಳ ನಡುವೆ ನುಗ್ಗಿಬರುತ್ತಿರುವ ಹಿಂದೀ ಭಾಷೆ ಈ ಎಲ್ಲ ಕಾರ್ಯವನ್ನೂ ನೆಕ್ಕಿ ನೊಣೆಯಬಹುದು; ಹೆಮ್ಮೆಯನ್ನೆಲ್ಲ ಅಳಿಸಿಹಾಕಬಹುದು. 'ಒಂದು ಕಾಲದಲ್ಲಿ ಸಮನ್ವಯ ಸಮಿತಿ ಇಂಥ ಕೆಲಸ ಮಾಡಿತು. ಪಾಪ !' ಎಂದು ಹೇಳುವಷ್ಟಕ್ಕೆ ಮಾತ್ರ ಇದರ ನೆನಪು ಉಳಿಯಬಾರದು. ಈ ಅಂಜಿಕೆ ಎಲ್ಲರ ಬೆನ್ನಹುರಿಯನ್ನೂ ನಡುಗಿಸುತ್ತಿದೆ.

ಸಮನ್ವಯ ಸಮಿತಿಯ ಉದ್ದೇಶ ಪೂರೈಸಿಲ್ಲ. ಆದ್ದರಿಂದ ಅದು ಮುಂದುವರಿಯಲೇಬೇಕು. ಅದಕ್ಕೆ ಭದ್ರತೆಯ ಬೊಜ್ಜು ಬೆಳೆದಿಲ್ಲ. ಅದರಲ್ಲಿ ಅಧಿಕಾರ ಗ್ರಹಿಸುವುದು ಪ್ರತಿಷ್ಠೆಯ, ಲಾಭದ ಸಂಗತಿ ಎಂಬ ಭಾವನೆಯೂ ಇಲ್ಲ. ಆದ್ದರಿಂದ ಅದು ಜೀವಂತವಾಗಿ ಮುಂದುವರಿಯಬಲ್ಲುದು. ಜೀವಕಣಗಳ ಪುನರ್ನವೀಕರಣವೂ ಬೆಳವಣಿಗೆಯ ಲಕ್ಷಣ ಬೆಳವಣಿಗೆಗೆ, ಅಗತ್ಯ. ಇತ್ತಕಡೆ ಸಮನ್ವಯ ಸಮಿತಿ ಲಕ್ಷ್ಯ ಹರಿಸಬೇಕು. ಹಳೆಯ ಕೆಲವೇ ಕೆಲಸಗಾರರ ಜೊತೆಗೆ ಹೊಸ ಹುರುಪಿನ ತಂಡ ಸೇರಿಕೊಳ್ಳುತ್ತಲೇ ಇರಬೇಕು. ನಿರಂತರವಾಗಿ ನಡೆಯುತ್ತಿರಬೇಕಾದ ಪ್ರಕ್ರಿಯೆಯಿದು.

# ವಿದ್ಯುನ್ಮಾನ ಯುಗದತ್ತ ಭಾರತೀಯ ಬ್ಯಾಂಕಿಂಗ್

**'ತಾನುಂಟೋ ಮೂರು ಲೋಕವುಂಟೋ!' ಎಂಬ ಗಾದೆ ಮಾತು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಇಂದು ನಿಜವಾಗುತ್ತಿದೆ. ಬ್ಯಾಂಕಿನ ಗ್ರಾಹಕನೇ ವಿಶ್ವದ ಕೇಂದ್ರ. ಕುಳಿತಲ್ಲಿಂದಲೇ ಅವನು ಗುಂಡಿಯೊತ್ತಿ ತನ್ನ ವ್ಯವಹಾರ ಸಾಗಿಸಬಲ್ಲ ; ಇಡೀ ವಿಶ್ವದೊಂದಿಗೆ ಸಂಪರ್ಕ ಸಾಧಿಸಬಲ್ಲ. ಇದನ್ನೆಲ್ಲ ಆಗಮಾಡಿಸುತ್ತಿದೆ—ಇಂದಿನ ವಿಜ್ಞಾನ, ವಿದ್ಯುನ್ಮಾನ.**

ಕಬ್ಬಿನಾಲೆ ವಸನ್ತಭಾರದ್ವಾಜ್
**ಸ್ಟೇಟ್ ಬ್ಯಾಂಕ್ ಆಫ್ ಮೈಸೂರು**
**ಹಾಸನ ಮುಖ್ಯ ಶಾಖೆ, ಹಾಸನ 573201**

ಒಂದು ಶತಮಾನದ ಹಿಂದೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಚೆಕ್‌ಗಳ ಆವಿಷ್ಕಾರವೇ ಒಂದು ಮಹತ್ವದ ಬೆಳವಣಿಗೆಯಾಗಿತ್ತು. ಆದರೆ ಈಗ ನಮ್ಮ ಬ್ಯಾಂಕುಗಳು ವಿದ್ಯುನ್ಮಾನ ಯುಗದತ್ತ ಮುನ್ನಡೆಯುತ್ತಿರುವುದು ಮತ್ತೊಂದು ಕ್ರಾಂತಿಕಾರಕ ಬದಲಾವಣೆಯ ಕುರುಹು. ಭೌತಿಕಸ್ವರೂಪದ ಹಣವೇ ಇಲ್ಲದ, ಕಾಗದ ಪತ್ರಗಳ ಬಳಕೆಯೇ ಇಲ್ಲದ, ವಿಚಿತ್ರ ಬ್ಯಾಂಕಿಂಗ್ ವಿಧಾನಕ್ಕೆ ನಾವು ಬದ್ಧರಾಗುತ್ತಿದ್ದೇವೆ ಎನ್ನುವುದು ಸೋಜಿಗದ ವಿಷಯವಾಗಿದೆ. ಗ್ರಾಹಕ ಮಹಾಶಯನಿಗೆ ತನ್ನ ಮನೆಯಲ್ಲೇ ತನ್ನ ಖಾತೆಯ ಬಗ್ಗೆ ಮಾಹಿತಿ ಸಿಗುವ, ಕ್ಷಣಾರ್ಧದಲ್ಲೇ ವಿಶ್ವದ ಮೂಲೆಮೂಲೆಯ ದೇಶಗಳ ಬ್ಯಾಂಕುಗಳೊಂದಿಗೆ ಸಂಪರ್ಕಹೊಂದುವ, ತನ್ನ ಜೇಬಿನಲ್ಲಿ ಹಣವನ್ನೇ ಇಟ್ಟುಕೊಳ್ಳದೆ ಮಾರುಕಟ್ಟೆಗಳಲ್ಲಿ ಬೇಕಾದ ಸಾಮಗ್ರಿಗಳನ್ನು ಪಡೆಯುವ ವಿಚಿತ್ರ-ವಿಶಿಷ್ಟ ವಿದ್ಯುನ್ಮಾನ ಬ್ಯಾಂಕಿಂಗ್ ಸೌಲಭ್ಯ ಉಂಟಾಗಲಿದೆಯೆಂದರೆ ಸ್ವಪ್ನಲೋಕವೇ ವಾಸ್ತವಗೊಳ್ಳುವ ಸುಮುಹೂರ್ತ ಬಂದಂತಿದೆ ಅಲ್ಲವೆ ?

ಭಾರತದಲ್ಲಿ ಮೊತ್ತಮೊದಲಿಗೆ ಗಣಕೀಕರಣದ ಆರಂಭ ಸುಮಾರು 1960ರ ದಶಕದಲ್ಲಿ ಉಂಟಾಯಿತು. ಭಾರತೀಯ ಜೀವವಿಮಾ ನಿಗಮ 1963ರಲ್ಲಿ ವಿಮಾ ಪಾಲಿಸಿಗಳನ್ನು ಕ್ರಮಬದ್ಧವಾಗಿ ಇರಿಸುವ ಪ್ರಕ್ರಿಯೆಗಾಗಿ ಗಣಕೀಕರಣವನ್ನು ಆರಂಭಿಸಿತು. ತದನಂತರ ಭಾರತೀಯ ರಿಸರ್ವ್ ಬ್ಯಾಂಕು ಸಂಶೋಧನೆ ಮತ್ತು ಅಂಕಿ ಅಂಶಗಳ ಅನುಕೂಲಕ್ಕಾಗಿಯೂ, ಭಾರತೀಯ ಸ್ಟೇಟ್ ಬ್ಯಾಂಕು ಅಂತರ್ ಬ್ಯಾಂಕುಗಳ ಲೆಕ್ಕಸಮನ್ವಯ (Reconcilation) ಕಾರ್ಯಗಳಿಗಾಗಿಯೂ ಗಣಕೀಕರಣವನ್ನು ಅವಲಂಬಿಸಿದುವು.

## ಮಹಾಪೂರದ ಫಲ

ರಾಷ್ಟ್ರೀಕರಣದ ಅನಂತರ ಬ್ಯಾಂಕುಗಳ ಕಾರ್ಯವ್ಯಾಪ್ತಿ ಬಹುತೇಕ ವರ್ಧಿಸಲಾರಂಭಿಸಿತು. ಸಂಖ್ಯಾದೃಷ್ಟಿಯಿಂದ ನೋಡಿದರೆ ಬ್ಯಾಂಕು ಶಾಖೆಗಳು 8,200ರಿಂದ (1969), 52,700ಕ್ಕೆ (1985) ಹೆಚ್ಚಿದುವು. ಬ್ಯಾಂಕುಗಳ ಠೇವಣಿ 18 ಪಾಲು ಹೆಚ್ಚಾದರೆ, ಸಾಲದ ಮೊತ್ತ 15 ಪಾಲು ವೃದ್ಧಿಸಿದವು. ಖಾತೆಗಳ ಸಂಖ್ಯೆಯೂ ಅಷ್ಟೇ ಪಾಲು ಹೆಚ್ಚಾದವು. ಪ್ರತಿ ತಿಂಗಳಿಗೆ ಅಂತರ್ ಬ್ಯಾಂಕು ಚೆಕ್ಕುಗಳು 78 ಲಕ್ಷದಿಂದ 212 ಲಕ್ಷಕ್ಕೆ ಏರಿದುವು. ಇದರಿಂದಾಗಿ ಸಾಂಖ್ಯಿಕ ಸಮಸ್ಯೆಗಳು ಸೃಷ್ಟಿಯಾಗುವುದರೊಂದಿಗೆ ಅಂಕಿ ಅಂಶಗಳ ಹೊಂದಾಣಿಕೆ ಮತ್ತು ಅವುಗಳ ವ್ಯವಸ್ಥಿತ ಪ್ರಕ್ರಮೀಕರಣ, ಯುಕ್ತ ಯೋಜನೆಗಳ ಆವಿಷ್ಕಾರ ಹಾಗೂ ಅನುಷ್ಠಾನ—ಹೀಗೆ ಹತ್ತು ಹಲವಾರು ಸಮಸ್ಯೆಗಳ ಮಹಾಪೂರವೇ ಎದುರಾಯಿತು.

ಹೀಗಾಗಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಯಾಂತ್ರೀಕರಣದ ಅಗತ್ಯ ಮಹತ್ತರವಾಯ್ತು. ಈ ನಿಟ್ಟಿನಲ್ಲಿ ಭಾರತ ಸರ್ಕಾರ ರಿಸರ್ವ್ ಬ್ಯಾಂಕಿನ ಡೆಪ್ಯುಟಿ ಗವರ್ನರ್ ಡಾ॥ ಸಿ. ರಂಗರಾಜನ್‌ರವರ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಿತು. ಯಾಂತ್ರೀಕರಣದ ಆವಶ್ಯಕತೆಯನ್ನು ಮನಗಂಡ ಮೇಲ್ಕಂಡ ಸಮಿತಿ, ಬ್ಯಾಂಕುಗಳಲ್ಲಿ ಶಾಖಾ ಹಂತ, ಪ್ರಾದೇಶಿಕ ಹಂತ ಮತ್ತು ಮುಖ್ಯ ಕಛೇರಿ ಹಂತ—ಹೀಗೆ ಮೂರು ಹಂತಗಳಲ್ಲಿ ಯಾಂತ್ರೀಕರಣ ಬೇಕೆಂಬುದಾಗಿ ಶಿಫಾರಸ್ಸು ಮಾಡಿತು.

ಈ ಹಿನ್ನೆಲೆಯಲ್ಲಿಯೂ ನಮ್ಮ ಬ್ಯಾಂಕುಗಳು ಇನ್ನೂ ವಿದ್ಯುನ್ಮಾನ ಯುಗದತ್ತ ನಡೆಯಲು ಯೋಚನೆ ಮಾಡುತ್ತಲೇ ಇವೆ. ವಿದ್ಯುನ್ಮಾನದ ವಿಧಿವಿಧಾನಗಳನ್ನು ಹೇಗೆ ಬಳಸಬೇಕು ? ಎಷ್ಟು ಬಳಸಬೇಕು ? ಎಷ್ಟು ಬೆಳೆಸಬೇಕು ? ಎಂಬಿತ್ಯಾದಿ ವಿಚಾರಗಳಲ್ಲಿ ನಮ್ಮ ಬ್ಯಾಂಕುಗಳು ಡೋಲಾಯಮಾನ ಸ್ಥಿತಿಯಲ್ಲಿಯೇ ಇವೆ.

ಈ ಸಂಧಿಗ್ಧತೆಯ ಸಂದರ್ಭದಲ್ಲಿ ವಿಶ್ವದ ಇತರ ಪುರೋಗಾಮಿ ರಾಷ್ಟ್ರಗಳ ಬ್ಯಾಂಕಿಂಗ್ ವಿಧಾನಗಳ ಅಭ್ಯಾಸ-ಅಧ್ಯಯನ ಸಂದರ್ಭಯೋಗ್ಯವೆಂದು ಭಾವಿಸಬಹುದಾಗಿದೆ.

## ಅನ್ಯರ ಅನುಭವ

ಇಂಗ್ಲೆಂಡ್ ಮತ್ತು ಅಮೆರಿಕಾಗಳಲ್ಲಿರುವ "ಕಾಂತೀಯ ಮಸಿ ಲಿಪಿ ಗ್ರಹಣ" (Magnetic Ink Character Recognition MICR) ತಂತ್ರಜ್ಞಾನ ಬಹಳ ಪ್ರಯೋಜನಕಾರಿ. ಚೆಕ್‌ಗಳ ಕೆಳಭಾಗದಲ್ಲಿರುವ ಸಂಕೇತ ರೇಖೆಯಲ್ಲಿ (Code line) ಕಾಂತೀಯ ಶಾಯಿಯಿಂದ ಬರೆದಿರುವ ಚೆಕ್ ನಂಬರುಗಳು ಚೆಕ್‌ಗಳ ಶೀಘ್ರ ತೀರುವಳಿಯಲ್ಲಿ ಬಹಳ ಸಹಾಯಕಾರಿಯಾಗುತ್ತವೆ. ಹಾಂಕಾಂಗ್ ದೇಶದಲ್ಲಿರುವ 'ಸ್ವಯಂಚಲೀಕೃತ ಸರಾಫ್ ಯಂತ್ರ (Automatic Teller Machine—A.T.M.) ಸೌಲಭ್ಯದಲ್ಲಿ ಗ್ರಾಹಕನೇ ಸ್ವತಃ ಯಂತ್ರವನ್ನು ಚಾಲಿಸಿ, ತನ್ನ ಗುರುತು ಕಾರ್ಡು ಮತ್ತು ಸಂಕೇತ ಸಂಖ್ಯೆಯನ್ನು ಕೊಟ್ಟು ಹಣವನ್ನು ಪಡೆಯಬಹುದಾಗಿದೆ. ಈ ಸಂಕೇತ ಸಂಖ್ಯೆಗಳನ್ನು ಬ್ಯಾಂಕು ಸಿಬ್ಬಂದಿಗಳು ಕೂಡಾ ತಿಳಿದಿಲ್ಲದಿರುವುದು ಇಲ್ಲಿ ಬಹಳ ಮುಖ್ಯವಾದ ವಿಚಾರವಾಗಿದೆ.

ಬ್ಯಾಂಕುಗಳಿದ್ದಲ್ಲಿಗೆ ಗ್ರಾಹಕ ಹೋಗದೆ, ತನ್ನ ಮನೆಯಲ್ಲೇ ಇದ್ದುಕೊಂಡು 'ಕೀಲಿಮಣೆ-ಇತ್ಯರ್ಥಕಗಳ (Key Board-Terminal) ಮೂಲಕ ಹಣದ ವರ್ಗಾವಣೆ ಮತ್ತು ತನ್ನ ಖಾತೆಯ ಬಗೆಗಿನ ಮಾಹಿತಿ ಸಂಗ್ರಹಣೆಗಳನ್ನು ಮಾಡಬಹುದಾಗಿದೆ. ಈ ಗೃಹಬ್ಯಾಂಕಿಂಗ್ ಸೌಲಭ್ಯ ಫ್ರಾನ್ಸ್ ದೇಶದ ಒಂದು ಕೋಟಿ ಮನೆಗಳಲ್ಲಿ 1990ರ ವೇಳೆಗೆ ಪೂರ್ಣಗೊಳ್ಳಲಿದೆಯಂತೆ. ಇಂಗ್ಲೆಂಡ್, ಅಮೆರಿಕ ದೇಶಗಳೂ ಈ ದಿಸೆಯಲ್ಲಿ ಹೆಚ್ಚಿನ ಪ್ರಯೋಗಗಳನ್ನು ಕೈಗೊಳ್ಳುತ್ತಿವೆ.

ಇದಕ್ಕಿಂತಲೂ ಅಚ್ಚರಿಯ ಬೆಳವಣಿಗೆಯೊಂದು ಸಿಂಗಾಪುರ ಮತ್ತು ದಕ್ಷಿಣ ಆಫ್ರಿಕಾ ದೇಶಗಳಲ್ಲಿ ಕಾಣಿಸಿಕೊಳ್ಳುತ್ತಿದೆ. ಇದಕ್ಕೆ "ವಿದ್ಯುನ್ಮಾನ ನಿಧಿ ವರ್ಗಾವಣೆ" ಎಂದು ಕರೆಯುತ್ತಾರೆ. ಇಲ್ಲಿ ಗ್ರಾಹಕನು ಪೇಟೆಗೆ ಹೋಗುವಾಗ ಹಣವನ್ನು ಒಯ್ಯ

ಬೇಕಾಗಿಲ್ಲ. ಚೆಕ್‌ಗಳು ಹಿಂದಿರುಗಿ ಬರುವ ಭಯವೇ ಇಲ್ಲ. ಕೇವಲ ತನ್ನ ಗುರುತು ಚೀಟಿಯೊಂದಿಗೆ ಅಂಗಡಿಗೆ ಹೋಗಿ ಅಲ್ಲಿರುವ ಇತ್ಯರ್ಥಕ (Terminal)ಗಳಲ್ಲಿ ಅದನ್ನು ಕೊಟ್ಟು, ತನ್ನ ಗುಪ್ತ ಸಂಕೇತಸಂಖ್ಯೆಯನ್ನು ತಿಳಿಸಿದರೆ, ನಿರ್ದೇಶಿಸಿದ ನಿಗದಿತ ಮೊತ್ತ ಅಂಗಡಿಯ ಮಾಲೀಕನ ಖಾತೆಗೆ ಕೆಲವೇ ಕ್ಷಣಗಳಲ್ಲಿ ವರ್ಗಾವಣೆಯಾಗುತ್ತದೆ. ಈ ಬ್ಯಾಂಕಿಂಗ್ ವಿಧಾನ ವೇಜೆಟ್ ನಿರೂಪಿಸಿದ ಬ್ಯಾಂಕಿಂಗ್ ವ್ಯಾಖ್ಯೆಗೇ ವಿರೋಧವಾಗಿದೆ ಎಂದರೆ ಎಷ್ಟೊಂದು ಆಶ್ಚರ್ಯ!

ವಿಶ್ವಮಟ್ಟದ "ವಿಶ್ವವ್ಯಾಪಿ ಅಂತರ್‌ಬ್ಯಾಂಕ್ ಹಣಕಾಸು ದೂರಸಂಪರ್ಕ ಸಂಘ" (Society for Worldwide Inter-Bank Financial Telecommunication) ವಿಶ್ವದುದ್ದಗಲಕ್ಕೂ ಅಂತರ್‌ಬ್ಯಾಂಕು ದೂರಸಂಪರ್ಕ ಸೌಲಭ್ಯವನ್ನು ವಿಸ್ತರಿಸಿದೆ. ಇದು ಬ್ಯಾಂಕಿಂಗ್ ವಿದ್ಯಮಾನದಲ್ಲಿ ಇತ್ತೀಚಿನ ಒಂದು ಉತ್ತಮ ಮುನ್ನಡೆ. ಈ ಸೌಲಭ್ಯದಲ್ಲಿ ಈಗಾಗಲೇ ವಿಶ್ವದ 900 ಬ್ಯಾಂಕುಗಳು ನೊಂದಾಯಿಸಲ್ಪಟ್ಟಿವೆ. ಈ ಸದಸ್ಯ ಬ್ಯಾಂಕುಗಳು ಅತ್ಯಧಿಕ ವೇಗದಲ್ಲಿ ಪರಸ್ಪರ ಸಂದೇಶಗಳನ್ನು ರವಾನಿಸಲು ಹಾಗೂ ಸಂಗ್ರಹಿಸಲು ಶಕ್ತವಾಗಿವೆ. ಅಂತರ್ರಾಷ್ಟ್ರೀಯ ತೀರುವೆಮನೆ ಸ್ವಯಂಚಲೀಕೃತ ಪಾವತಿ ವಿಧಾನ (Clearing House Automated Payment System—CHAPS). ಕ್ರೆಡಿಟ್ ಕಾರ್ಡ್, ಚೆಕ್ ಕಾರ್ಡ್, ಲೇಸರ್ ಕಾರ್ಡ್ ಎಂದು ಮುಂತಾದ ನವನವೋನ್ಮೇಷ ಬ್ಯಾಂಕಿಂಗ್ ವಿಧಾನಗಳು ಪ್ರಪಂಚಾದ್ಯಂತ ಪಸರಿಸುತ್ತಿರುವುದು ಮಾನವನ ಮೆದುಳುಶಕ್ತಿಯ ಹೆಗ್ಗುರುತು!

## ಹಣವೋ, ಅದರ ಮಾಹಿತಿಯೋ?

1982ರ "ಯುರೋಮನಿ" ಹೇಳಿಕೆ ಪ್ರಕಾರ—"ಹಣಕ್ಕಿಂತಲೂ ಹಣದ ಬಗೆಗಿನ ಮಾಹಿತಿ ಹೆಚ್ಚು ಮುಖ್ಯ"ವಾದ ವಿಚಾರವಾಗಿದೆ. ದಿನದಿಂದ ದಿನಕ್ಕೆ ಸಂಕೀರ್ಣಗೊಳ್ಳುತ್ತಿರುವ ವಿದೇಶೀ ವಿನಿಮಯ ಮಾರುಕಟ್ಟೆ, ದೈನದಿಂದ ಬ್ಯಾಂಕಿಂಗ್ ವ್ಯವಹಾರಗಳು, ಕುಸಿಯುತ್ತಿರುವ ಗ್ರಾಹಕ ಸೇವೆ, ಅಂಕಿ ಅಂಶಗಳ ನಿರ್ವಹಣೆಯಲ್ಲಿ ವಿಳಂಬ ಮುಂತಾದುವುಗಳನ್ನು ಗಮನಿಸಿದಾಗ, ಕಡಿಮೆ ಅವಧಿಯಲ್ಲಿ ಹೆಚ್ಚು ದಕ್ಷತೆಯಿಂದ, ಸಮರ್ಪಕವಾಗಿ ಕಾರ್ಯ ನಿರ್ವಹಿಸುವ ವಿದ್ಯುನ್ಮಾನ ವಿಧಾನ ಅತ್ಯಾವಶ್ಯಕವಾಗಿದೆ. ಶೀಘ್ರ ಮಾಹಿತಿ, ವ್ಯವಹಾರ ಶೇಖರಣೆ—ಮುಂತಾದುವುಗಳನ್ನು ಅತ್ಯುತ್ತಮ ಕೌಶಲದಿಂದ, ಶೀಘ್ರವಾಗಿ ಸಾಧಿಸುವ ಚೈತನ್ಯ ವಿದ್ಯುನ್ಮಾನವಿಧಾನದಿಂದ ಮಾತ್ರ ಸಾಧ್ಯವಾಗಬಲ್ಲುದು. ಪ್ರಪಂಚದ ಇತರ ದೇಶಗಳಲ್ಲಿ ನಡೆಯುತ್ತಿರುವ ಮುಂದುವರಿದ ಬ್ಯಾಂಕಿಂಗ್ ತಂತ್ರಜ್ಞಾನದ ಬಗ್ಗೆ ನಮ್ಮ ಭಾರತೀಯ ಗ್ರಾಹಕ ಆಸೆಪಡದಿದ್ದರೂ, ಅತ್ಯಗತ್ಯದ ಸೇವಾ ವಿಧಾನಗಳನ್ನು ನಿರೀಕ್ಷಿಸುತ್ತಾನೆ ಎಂಬುದಂತೂ ಸತ್ಯ. ಕನಿಷ್ಠಪಕ್ಷ ಹಣದ ವರ್ಗಾವಣೆ, ಚೆಕ್‌ಗಳನ್ನು ಮುರಿಸುವಿಕೆ, ಖಾತೆಗಳ ವಿವರಣ ತಖ್ತೆಗಳ ನೀಡಿಕೆ, ಚೆಕ್‌ಗಳ ಶೀಘ್ರ ತೀರುವಳಿ, ಬಡ್ಡಿ ಲೆಕ್ಕಾಚಾರಗಳಲ್ಲಿ ನಿಖರತೆ—ಮುಂತಾದುವುಗಳಾದರೂ ಕ್ಲಪ್ತ ಕಾಲಕ್ಕೆ ಸಮರ್ಪಕವಾಗಿ ಆಗಬೇಕೆಂಬುದು ನಮ್ಮ ಪ್ರತಿಯೊಬ್ಬ ಗ್ರಾಹಕನ ಆಸೆ.

## ನಮ್ಮಲ್ಲಿ?

ನಮ್ಮ ಬ್ಯಾಂಕುಗಳು ಈ ಎಲ್ಲ ಅಂಶಗಳನ್ನು ಗಮನಿಸಿ, ಸಾಧ್ಯವಾದಷ್ಟು ವಿದ್ಯುನ್ಮಾನ ವಿಧಾನಗಳನ್ನು ಅಳವಡಿಸಿಕೊಳ್ಳಲು ಇಚ್ಛಿಸಿವೆ. ದೇಶದ ಸುಮಾರು 100 ಕೇಂದ್ರಗಳಲ್ಲಿರುವ 10,000 ಬ್ಯಾಂಕ್ ಶಾಖೆಗಳಲ್ಲಿ ವ್ಯವಹಾರ ಕೇಂದ್ರೀಕೃತವಾಗಿರುವುದನ್ನು ಗಮನಿಸಿ, 1988ರ ಅಂತ್ಯಕ್ಕೆ ಸುಮಾರು 8,500 ಶಾಖೆಗಳಲ್ಲಿ ಗಣಕೀಕರಣ ಕೈಗೊಳ್ಳಬೇಕೆಂಬ ನಿರ್ಧಾರವಾಗಿದೆ. ನಮ್ಮ ರಾಷ್ಟ್ರೀಕೃತ ಬ್ಯಾಂಕ್‌ಗಳ ಪ್ರಾದೇಶಿಕ ಮತ್ತು ವಲಯ ಕಛೇರಿಗಳಲ್ಲಿ ಮಿನಿ ಗಣಕಯಂತ್ರಗಳ ಬಳಕೆ ಈಗಾಗಲೇ ಆರಂಭವಾಗಿದೆ. ಇದರಿಂದಾಗಿ ಶಾಖೆಗಳ ಮೇಲೆ ಹಿಡಿತ, ನಿಯಂತ್ರಣ. ಅಂಕಿಅಂಶಗಳ ಸಂಗ್ರಹಣೆ, ನೀತಿ ನಿರ್ದೇಶಗಳ ರಚನೆ, ರಿಸರ್ವ್ ಬ್ಯಾಂಕು ಮತ್ತು ಸರಕಾರಕ್ಕೆ ಕ್ಲುಪ್ತಕಾಲದಲ್ಲಿ ಸರಿಯಾದ ಮಾಹಿತಿ ನೀಡಿಕೆ—ಮುಂತಾದ ಅನುಕೂಲ ಉಂಟಾಗುತ್ತವೆ.

ವಿಶ್ವವ್ಯಾಪೀ ಅಂತರ ಬ್ಯಾಂಕ್ ಹಣಕಾಸು ದೂರಸಂಪರ್ಕ ಸಂಘದ (SWIFT) ಸೌಕರ್ಯ ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲೂ ವಾರದ ಏಳೂ ದಿನಗಳಲ್ಲೂ ಅವ್ಯಾಹತವಾಗಿ ಇರುವುದರಿಂದ ನಮ್ಮ ಕೆಲವು ಬ್ಯಾಂಕುಗಳು ಈಗಾಗಲೇ ಇದರ ಸದಸ್ಯತ್ವ ಹೊಂದಿವೆ. ವಿದೇಶೀ ಬ್ಯಾಂಕುಗಳೊಂದಿಗೆ ಶೀಘ್ರ ಸಂಪರ್ಕ, ಚೆಕ್ ತೀರುವಳಿ, ಉದರಿಪತ್ರ, (letter of credit), ವಿದೇಶೀ ವಿನಿಮಯ ವಿಚಾರ—ಮುಂತಾದ ಸಂದೇಶಗಳು ಸುಲಭವಾಗಿ ದೊರಕಬಲ್ಲುವಾಗಿವೆ.

ಭಾರತೀಯ ರಿಸರ್ವ್ ಬ್ಯಾಂಕ್ ಕೂಡಾ ಮಿನಿ ಗಣಕಯಂತ್ರಗಳನ್ನು ಬಳಸುತ್ತಿದೆ. ಇದರಿಂದ ದೇಶದ ಪ್ರಮುಖ ಮಹಾ ನಗರಗಳಲ್ಲಿನ ಉತ್ತಮ ತೀರುವೆ ಮನೆಗಳು (Clearing Cell) ದಿನಕ್ಕೆ ಎರಡು ಬಾರಿ ಚೆಕ್ ತೀರುವಳಿ ಮಾಡಲು ಶಕ್ತವಾಗಿವೆ. ಇತರ ಬ್ಯಾಂಕುಗಳು ಹೊಂದಿರುವ ಚಾಲ್ತಿ ಖಾತೆಗಳ ವ್ಯವಹಾರ, ಅಭಿಕರಣ ಬ್ಯಾಂಕ್ (Agency Bank), ಖಾತೆಯಲೆಕ್ಕಾಚಾರ, ಆರ್ಥಿಕ ಕಂಪೆನಿಗಳ ಅಂಕಿ—ಅಂಶ, ಆಡಳಿತ ಮತ್ತು ವ್ಯವಸ್ಥೆಗಳ ಬಗೆಗಿನ ಮಾಹಿತಿ, ಉದ್ಯೋಗಿಗಳ ಭರ್ತಿ ಮತ್ತು ಬಡ್ತಿ ಬಗೆಗಿನ ದಾಖಲೆ ಪತ್ರಗಳ ಪ್ರಕ್ರಿಯೆ—ಎಂದು ಮುಂತಾಗಿ ಅನೇಕ ವಿಷಯಗಳಲ್ಲಿ ಗಣಕೀಕರಣದ ವ್ಯವಸ್ಥೆ ಸಾಗಿದೆ.

ಬ್ಯಾಂಕುಗಳಲ್ಲಿ ತಾಂತ್ರೀಕರಣ ಯೋಜನಾಬದ್ಧವಾಗಿ ಸಾಗಬೇಕಾಗಿದೆ. ಅಂಕಿ ಅಂಶಗಳ ಕೇಂದ್ರೀಕರಣದ ಪ್ರಕ್ರಿಯೆಯನ್ನು ಪ್ರಬಲಗೊಳಿಸಲು, ಖಾತೆಗಳ ವ್ಯವಸ್ಥೀಕರಣ, ಹಳೆಯ ಕಡತಗಳ ಪುನರ್ ಪರಿಶೀಲನೆ ಮತ್ತು ಹೊಂದಾಣಿಕೆ, ವಿವರಣ ಹೇಳಿಕೆಗಳಲ್ಲಿ ನಿಖರತೆ ಮುಂತಾದ ಸಿದ್ಧತೆಗಳಾಗಬೇಕಾಗಿದೆ. ಅನಗತ್ಯ ವ್ಯಯನಿವಾರಣೆ, ಕನಿಷ್ಠ ವೇಳೆಯಲ್ಲಿ ಗರಿಷ್ಠ ವ್ಯವಹಾರ, ಉನ್ನತ ತಂತ್ರಜ್ಞಾನಗಳ ಬಳಕೆ ಇತ್ಯಾದಿಗಳಿಂದ ಲಾಭ ಮತ್ತು ಉತ್ಪಾದಕತೆ ಉಂಟಾಗಬಲ್ಲುದು. ಈ ನಿಟ್ಟಿನಲ್ಲಿ ಇನ್ನಷ್ಟು ಸುಧಾರಿತ ತಂತ್ರಜ್ಞಾನ ವಿದ್ಯುನ್ಮಾನ ವಿಧಾನಗಳನ್ನು ಅಳವಡಿಸುವುದರಿಂದ ಮಾತ್ರ ಸಾಧ್ಯ.

ದೇಶದ ನಾಲ್ಕು ಪ್ರಮುಖ ಮಹಾ ನಗರಗಳಾದ ದೆಹಲಿ, ಕಲ್ಕತ್ತಾ, ಮದರಾಸು ಮತ್ತು ಬೊಂಬಾಯಿಗಳಲ್ಲಿ ಈಗ "ಕಾಂತೀಯ ಮಸಿ ಲಿಪಿ ಗ್ರಹಣ (MICR) ತಂತ್ರಜ್ಞಾನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಹಾಗೆಯೇ ಹೆಚ್ಚಿನ ಬ್ಯಾಂಕುಗಳು ಚೆಕ್ ಕಾರ್ಡು ಪದ್ಧತಿಯನ್ನು ಆರಂಭಿಸಿ ಗ್ರಾಹಕ ಸೇವಾ ವಿಧಾನಗಳಲ್ಲಿ ಹೊಸ ಪಲ್ಲವಿ ಹಾಡಿವೆ. ದೈನಂದಿನ ಲೆಕ್ಕಪತ್ರ, ಪಹಣಿ ಶಿಲ್ಕುಗಳ ಸರಿದೂಗಿಸುವಿಕೆ, ಅಂತರಬ್ಯಾಂಕ್ ಲೆಕ್ಕಸಮನ್ವಯ ಕಾರ್ಯ (Reconciliation)—ಮುಂತಾದ ಕೆಲಸಗಳಲ್ಲಿ ವಿದ್ಯುನ್ಮಾನ ಸೌಕರ್ಯ ಅಸಮರ್ಪಕ ಮಾನವ ಶಕ್ತಿಗಿಂತ ಹೆಚ್ಚು ಸಮರ್ಥನೀಯವಾಗಿ, ಸಮರ್ಪಕವಾಗಿ ಕಾರ್ಯನಿರ್ವಹಿಸಬಲ್ಲುದಾಗಿದೆ. ಸಂಪನ್ಮೂಲಗಳ ಹಾನಿರಹಿತ ಬಳಕೆ, ಮೂಲಬೆಲೆ, ಪ್ರಯೋಜನ, ಲಾಭ, ಸೇವೆ—ಹೀಗೆ ಹತ್ತಾರು ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳ ನಿವಾರಣೆಯಲ್ಲಿ ಗಣಕೀಕರಣ ಸ್ವಾಗತಾರ್ಹವೆಂದು ನಮ್ಮ ಬ್ಯಾಂಕುಗಳು ಮನಗಾಣುತ್ತಿವೆ. ಆ ಬಗ್ಗೆ ಎಟಕುವ ಬಂಡವಾಳಕ್ಕೆ ಅನುಗುಣವಾಗಿ ಈಗಾಗಲೇ ಸಾಕಷ್ಟು ಪ್ರಯತ್ನವನ್ನೂ ಕೈಗೊಂಡಿವೆ. ಮುಂದುವರಿದ ದೇಶಗಳಲ್ಲಿ ನಡೆದಷ್ಟು ಉನ್ನತ ತಂತ್ರಜ್ಞಾನದ ಅಳವಡಿಕೆ, ನಮ್ಮ ಸೀಮಿತ ಬಂಡವಾಳದಲ್ಲಿ ಕೈಗೂಡದಿರಬಹುದು. ಆದರೂ ಸಾಧ್ಯವಿದ್ದಮಟ್ಟಿಗೆ ಬ್ಯಾಂಕುಗಳು ಪ್ರಯತ್ನಪೂರ್ವಕವಾಗಿ ಮುನ್ನುಗ್ಗಬೇಕಾಗಿದೆ. ಇದಕ್ಕಾಗಿ ವ್ಯವಸ್ಥಿತ ಯೋಜನೆ, ನಿಯಂತ್ರಣ, ಮೇಲ್ವಿಚಾರಣೆ, ಪ್ರಾಮಾಣಿಕ ಯತ್ನ ಅಗತ್ಯವಾಗಿದೆ.

## ಏನಾಗಬೇಕು?

ನಮ್ಮ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಈ ಹೊಸ ಬೆಳವಣಿಗೆಗಳು ಕಂಡುಬರುತ್ತಿರುವ ಈ ಸಮಯದಲ್ಲಿಯೇ ಕೆಲವು ಹೊಸ ಸುಧಾರಣೆಗಳೂ ಆಗಬೇಕಾಗಿದೆ. ಮೊದಲಾಗಿ, ಬ್ಯಾಂಕಿಂಗ್ ಕಾನೂನಿನ ತಿದ್ದುಪಡಿ ಮುಖ್ಯವಾದ ವಿಚಾರ. ವೇಜೆಟ್‌ನ ವ್ಯಾಖ್ಯೆಯ ಪ್ರಕಾರ ಚೆಕ್ಕನ್ನು ಪಡೆಯುವುದು

ಮತ್ತು ಅವುಗಳಿಗೆ ಹಣವನ್ನು ನೀಡುವುದೇ ಬ್ಯಾಂಕುಗಳ ಮುಖ್ಯ ಕರ್ತವ್ಯವಾಗಿದೆ. ಆದರೆ ಈ ಮೂಲಭೂತ ಕಾರ್ಯವ್ಯಾಪ್ತಿಯೇ ಈ ಹೊಸ ವಿಧಾನಗಳಿಂದ ಮಾಯವಾಗುವ ಸಾಧ್ಯತೆಯಿದೆ. ಹಾಗಾಗಿ ಬ್ಯಾಂಕಿಂಗ್ ಬಗ್ಗೆ ಪುನರ್‌ವ್ಯಾಖ್ಯೆ, ಬ್ಯಾಂಕು ಮತ್ತು ಗ್ರಾಹಕನ ಹಕ್ಕು ಹೊಣೆಗಳ ಪುನರ್ ವಿಮರ್ಶೆ, ಕ್ರಮ–ಅನುಷ್ಠಾನಗಳ ವಿವರಣೆ ಇತ್ಯಾದಿ ಅಗತ್ಯವಾಗಿದೆ. ಬ್ಯಾಂಕಿಂಗ್ ಗೌಪ್ಯತೆಯನ್ನು ಉಳಿಸುವಲ್ಲಿ ಗಣಕೀಕರಣವೂ ನೆರವಾಗಬೇಕಾಗಿದೆ. ವಿದ್ಯುನ್ಮಾನ ವಿಧಾನಗಳ ಬಳಕೆಯನ್ನು ವಿರೋಧಿಸುವ ಕಾರ್ಮಿಕ ವರ್ಗದ ಚಳವಳಿ ಮತ್ತು ಸಿಬ್ಬಂದಿ ಅಸಹನೆಯನ್ನು ಸಮರ್ಪಕ ವಿಧಾನಗಳಿಂದ ಪರಿಹರಿಸಬೇಕಾಗಿದೆ. ಸಿಬ್ಬಂದಿ ಮತ್ತು ಆಡಳಿತ ವರ್ಗದ ನಡುವಣ ಒಪ್ಪಂದಗಳು ಇನ್ನೂ ಅಪೂರ್ಣ ವಿದ್ಯುನ್ಮಾನ ವಿಧಾನವನ್ನು ಅನುಸರಿಸಲು ಒಪ್ಪಿಗೆ ನೀಡಿಲ್ಲದಿರುವುದು ವಿಷಾದನೀಯ. ಈ ಹೊಸ ವಿಧಾನಗಳಿಂದ ಮಾನವ ಸಂಪನ್ಮೂಲಗಳು ಅಲಕ್ಷ್ಯವಾಗುವುದರೊಂದಿಗೆ, ನಿರುದ್ಯೋಗ ಸಮಸ್ಯೆ ಪ್ರಬಲಗೊಳ್ಳುತ್ತದೆ ಎಂಬ ವಾದವನ್ನು ಉತ್ತಮ ಉದಾಹರಣೆಗಳೊಂದಿಗೆ ಗೆಲ್ಲಬೇಕಾಗಿದೆ. ಈ ನಿಟ್ಟಿನಲ್ಲಿ ಸಿಬ್ಬಂದಿಗಳಿಗೆ ಉತ್ತಮ ತರಬೇತಿ ನೀಡಿ ವಿದ್ಯುನ್ಮಾನ ವಿಧಾನಗಳಿಂದ ಉಂಟಾಗುವ ಪ್ರಯೋಜನಗಳ ಅರಿವು ಮೂಡಿಸಬೇಕಾಗಿದೆ. ಒಂದು ಗಣಕ ಯಂತ್ರದ ಚಾಲನೆಗೆ, ಕ್ರಿಯಾಶೀಲತೆಗೆ, ಮಾನವನ ಮೇಲ್ವಿಚಾರಣೆ, ನಿರ್ದೇಶ ಅತೀ ಅಗತ್ಯವೆಂಬುದನ್ನು ಮನಗಾಣಿಸಬೇಕಾಗಿದೆ. ಇದರಿಂದ ಉದ್ಯೋಗಾವಕಾಶ ವೃದ್ಧಿಸುತ್ತದೆಯೆಂದೂ ತಿಳಿಸಿಕೊಡಬೇಕಾಗಿದೆ.

ಅಮೆರಿಕಾದ ಬ್ಯಾಂಕುಗಳಲ್ಲಿ ಮಿಲಿಯಗಟ್ಟಲೆ ಡಾಲರುಗಳನ್ನು ವಿದ್ಯುನ್ಮಾನ ಖದೀಮರು ಕೊಳ್ಳೆ ಹೊಡೆದಿದ್ದಾರಂತೆ. ವಿದ್ಯುನ್ಮಾನ ವಿಧಾನದಲ್ಲಿ ಕ್ಷಣಾರ್ಧದಲ್ಲಿ ಅತ್ಯಧಿಕ ಮೊತ್ತದ ಹಣ ವರ್ಗಾವಣೆಯಾಗುವುದರಿಂದ ಇಲ್ಲಿ ನಡೆದ ಅಚಾತುರ್ಯಗಳನ್ನು ಪತ್ತೆಹಚ್ಚುವುದೂ ಕ್ಲಿಷ್ಟಕರ. ಆದ್ದರಿಂದ ನಮ್ಮ ಬ್ಯಾಂಕುಗಳಲ್ಲಿ ಈ ಪ್ರತಿಭಾವಂತ ಖದೀಮ ಕಳ್ಳರು ದುರ್ವ್ಯವಹಾರ ನಡೆಸದಂತೆ, ನಾವು ಮುಂಜಾಗ್ರತೆ ವಹಿಸಬೇಕಾಗಿದೆ. ಅದಕ್ಕಾಗಿ ಯೋಗ್ಯ ಚಾಣಾಕ್ಷ ಲೆಕ್ಕಪರಿಶೋಧಕ ಪದ್ಧತಿಯನ್ನು ರೂಢಿಸಿಕೊಳ್ಳಬೇಕಾಗಿದೆ.

ವಿದ್ಯುನ್ಮಾನ ವಿಧಾನ ಫಲಪ್ರದವಾಗಬೇಕಿದ್ದರೆ ಮುಖ್ಯವಾಗಿ ಹವಾನಿಯಂತ್ರಣ, ಅನಿರ್ಬಂಧಿತ ವಿದ್ಯುತ್ ಸರಬರಾಜು ಇತ್ಯಾದಿ ಅತ್ಯವಶ್ಯ. ಆದರೆ ಭಾರತದಂತಹ ಬಡದೇಶದಲ್ಲಿ ವಿದ್ಯುತ್ ಕೊರತೆಯೊಂದು ಸರ್ವೇಸಾಮಾನ್ಯವಾಗುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಬ್ಯಾಂಕುಗಳು ಈ ವಿಧಾನ ಅನುಸರಿಸಿದರೆ ಅನುಕೂಲಕ್ಕಿಂತಲೂ ಅನಾಹುತಗಳೇ ಉಂಟಾಗುವ ಅಪಾಯವಿದೆ. ಆದ್ದರಿಂದ ಈ ದಿಸೆಯಲ್ಲೂ ಹೆಚ್ಚಿನ ಪ್ರಯತ್ನ ಸಾಗಬೇಕಾಗಿದೆ. ಅವಿದ್ಯಾವಂತರೂ ಈ ನೂತನ ವಿಧಾನಗಳ ಮೂಲಕ ಬ್ಯಾಂಕುಗಳೊಂದಿಗೆ ವ್ಯವಹರಿಸುವಂತೆ ಮಾಡುವಲ್ಲಿಯೂ ದೊಡ್ಡ ಸಾಧನೆಯ ಆವಶ್ಯಕತೆಯಿದೆ. ಸಾರ್ವಜನಿಕರಿಗೆ ಈ ಹೊಸ ಬದಲಾವಣೆಯಿಂದ ಉಂಟಾಗುವ ಪ್ರಯೋಜನಗಳ ಬಗ್ಗೆ ಪ್ರೇರಣೆ ಕೊಡಬೇಕಾಗಿದೆ.

ಹಳ್ಳಿಗಳೇ ಹೆಚ್ಚಾಗಿರುವ ನಮ್ಮ ದೇಶದಲ್ಲಿ ಪ್ರತಿ ಹಳ್ಳಿಗೂ ಈ ವಿದ್ಯುನ್ಮಾನವಿಧಾನದ ಬ್ಯಾಂಕಿಂಗ್ ಸೌಕರ್ಯ ತಲುಪಬೇಕಾದರೆ, ವಿದ್ಯುದೀಕರಣ, ದೂರಸಂಪರ್ಕ, ಸಾರಿಗೆ–ಸಾಧನ, ಅಂಚೆ–ತಂತಿ ಮುಂತಾದ ಸೌಲಭ್ಯಗಳು ಬೇಗನೆ ದೊರೆಯಬೇಕಾಗಿದೆ. ಗ್ರಾಮೀಣ ಪ್ರದೇಶದಲ್ಲಿರುವ ಬ್ಯಾಂಕುಗಳು ಈ ದಿಸೆಯಲ್ಲಿ ವಂಚಿತವಾಗಿರುವುದರಿಂದ, ಗ್ರಾಮೀಣ ಜನರಿಗೆ ಈ ವಿಧಾನದ ಸವಲತ್ತುಗಳು ಅಲಭ್ಯವಾಗಿವೆ. ಈ ದಿಸೆಯಲ್ಲೂ, ಸಮಗ್ರ ಗ್ರಾಮೀಣ ಅಭಿವೃದ್ಧಿ ಹೊಣೆ ಹೊತ್ತ ಸರಕಾರ ಕೂಡ ಗಮನ ಹರಿಸಬೇಕಾಗಿದೆ,

ವಿದೇಶಿ ಸಾಲ ಮಾಡಿ, ಅಧಿಕ ಬಂಡವಾಳ ಹೂಡಿ ನಾವು ಆರಂಭಿಸುವ ಈ ನೂತನ ವಿಧಾನಗಳು ನಮ್ಮ ಬ್ಯಾಂಕುಗಳಿಗೆ ಒಂದು ಪಂಥಾಹ್ವಾನವಾಗಲಿ. ಭಾರತದ ಜನತೆಗೆ ಒಂದು ವರದಾನವಾಗಲಿ; ಅಭಿಶಾಪವಾಗದಿರಲಿ. ಸಂಕೀರ್ಣ ಸ್ಥಿತಿಯನ್ನು ಎದುರಿಸಿ ನಿಲ್ಲುವ, ಪ್ರಗತಿಪರ ರಾಷ್ಟ್ರಗಳೊಂದಿಗೆ ಸಮಾನ ದಕ್ಷತೆಯಿಂದ ಸ್ಪರ್ಧಿಸುವ ವಿಧಿ–ವಿಧಾನ, ಕ್ರಮ ಅನುಷ್ಠಾನ ನಮ್ಮ ಬ್ಯಾಂಕುಗಳಿಗೆ ಸಿದ್ಧಿಸಲಿ. ವಿದ್ಯುನ್ಮಾನ ಯುಗದತ್ತ ಭಾರತೀಯ ಬ್ಯಾಂಕಿಂಗ್ ಸಾಗಲಿ.



# ಬ್ಯಾಂಕುಗಳಲ್ಲಿ ಲೆಕ್ಕ ಪರಿಶೋಧನೆ

**ಉಬ್ಬುತ್ತ ಸಾಗಿರುವ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ನಿರೀಕ್ಷಣೆ ಹಾಗೂ ಲೆಕ್ಕಪರಿಶೋಧನೆಯ ಕಾರ್ಯ ಬಹಳಷ್ಟು ಮಹತ್ವ ಪಡೆದಿದೆ. ನಾನಾ ಹಂತಗಳಲ್ಲಿ, ನಾನಾ ಅಭಿಕರಣಗಳ ಮೂಲಕ ಈ ಕೆಲಸ ನಡೆಯುತ್ತಿದೆ ಆದರೆ ಇದೆಲ್ಲ ಎಷ್ಟರಮಟ್ಟಿಗೆ ಸಮರ್ಪಕ?**

**ಬ. ರಾ. ಸುರೇಂದ್ರ**
ಮೈಸೂರು ಬ್ಯಾಂಕ್, ಮುಖ್ಯ ಕಛೇರಿ
ಅಶೋಕಾ ರಸ್ತೆ, ಮೈಸೂರು

ಬ್ಯಾಂಕುಗಳಲ್ಲಿ ಲೆಕ್ಕಪರಿಶೋಧನೆ ಮತ್ತು ಪರೀಕ್ಷಣೆ ಎರಡನ್ನೂ ಒಂದೇ ಅರ್ಥದಲ್ಲಿ ಬಹಳ ಕಾಲದಿಂದಲೂ ಉಪಯೋಗಿಸಲಾಗುತ್ತಿದೆ. ಸಾಮಾನ್ಯವಾಗಿ ಪರೀಕ್ಷಣೆ ಎಂದರೆ ತಾಳೆ ನೋಡುವುದು ಎಂದರ್ಥ. ಬ್ಯಾಂಕುಗಳಲ್ಲಿ ನೀತಿ ನಿಯಮಗಳು, ಉಪನಿಯಮಗಳು, ಅಧಿನಿಯಮಿತ ಬದ್ಧತೆಗಳು ವ್ಯವಸ್ಥಾಪಕ ಮಂಡಳಿ ರೂಢಿಸಿದಂತೆ ಪರಿಪಾಲಿಸಲಾಗುತ್ತಿದೆಯೇ ಎಂಬುದನ್ನು ದೃಢೀಕರಿಸಿಕೊಳ್ಳುವುದು.

ಸರ್ಕಾರಿ ಕಛೇರಿಗಳು, ಖಾಸಗಿ ಹಾಗು ಸಾರ್ವಜನಿಕ ವಲಯ ಸಂಸ್ಥೆಗಳು ವೃತ್ತಿಯ ಸನ್ನದು ಲೆಕ್ಕಿಗರಿಂದ ಲೆಕ್ಕ ಪರಿಶೋಧನೆಯನ್ನು ಮಾಡಿಸಿದರೂ ತಮ್ಮವೇ ಆದ ಆಂತರಿಕ ಲೆಕ್ಕಪರಿಶೋಧನ ಇಲಾಖೆಗಳನ್ನೂ ಸ್ಥಾಪಿಸಿಕೊಂಡಿವೆ. ಬ್ಯಾಂಕುಗಳೂ ಇದೇ ದಿಸೆಯಲ್ಲಿ ಸಾಗಿಬಂದಿವೆ.

## ಲೆಕ್ಕ ಪರಿಶೋಧನ ವ್ಯವಸ್ಥೆಯ ಹಿನ್ನೆಲೆ

ಲೆಕ್ಕ ಪರಿಶೋಧನೆ ಮತ್ತು ಪರೀಕ್ಷಣೆ ವ್ಯವಸ್ಥೆ 'ಪ್ರೆಸಿಡೆನ್ಸಿ' ಬ್ಯಾಂಕಿನ ದಿನಗಳಿಂದಲೂ ಅಂದರೆ ಸ್ವಾತಂತ್ರ್ಯಪೂರ್ವ ದಿವಸಗಳಿಂದಲೂ ನಡೆದು ಬಂದಿದೆ. ವ್ಯವಸ್ಥೆ ನಡೆದು ಬಂದ ಹಾದಿಯನ್ನು ಅವಲೋಕಿಸಿದಾಗ, 1969ರಲ್ಲಿನ ಬ್ಯಾಂಕುಗಳ ರಾಷ್ಟ್ರೀಕರಣಕ್ಕೆ ಮುಂಚೆ ಕೇವಲ ಭಾರತೀಯ ಸ್ಟೇಟ್ ಬ್ಯಾಂಕ್ ಮಾತ್ರ ಅಧಿಕಾರಯುತವಾಗಿ ಬ್ಯಾಂಕಿಂಗ್ ಮತ್ತು ಹಣಸಂಬಂಧಿ ವ್ಯವಹಾರ ನಡೆಸುತ್ತಿತ್ತು. ಆಗಿನ ವ್ಯವಸ್ಥೆಯ ಪ್ರಕಾರ ಲೆಕ್ಕ

ಪರಿಶೋಧನೆಯನ್ನು ಬ್ಯಾಂಕುಗಳ ಪ್ರತಿಯೊಂದು ಶಾಖೆಯಲ್ಲೂ 5 ಅಥವಾ 6 ವರ್ಷಗಳಿಗೊಮ್ಮೆ ನಡೆಸಲಾಗುತ್ತಿತ್ತು. ಅಂದು ಇದರ ಮುಖ್ಯ ಉದ್ದೇಶಗಳು ಇಂತಿದ್ದವು ;

1 ಪ್ರತಿಯೊಂದು ಶಾಖೆಯಲ್ಲೂ ವ್ಯವಸ್ಥಾಪಕ ಮಂಡಳಿ ರೂಪಿಸಿದಂತೆ ಕಾರ್ಯವಿಧಾನಗಳನ್ನು ಪಾಲಿಸಲಾಗುತ್ತಿದೆಯೆ ?
2 ಶಾಖೆಗಳಲ್ಲಿ ಆಡಳಿತವರ್ಗ ಸುಸೂತ್ರವಾಗಿ, ಪರಿಣಾಮಕಾರಿಯಾಗಿ ಆಡಳಿತ ಕಾರ್ಯವನ್ನು ನಡೆಸುತ್ತಿದೆಯೆ ?
3 ಬ್ಯಾಂಕುಗಳ ಹಕ್ಕುಗಳಿಗೆ ಚ್ಯುತಿಯಾಗದಂತೆ ವ್ಯವಸ್ಥಾಪಕರು ನಿರ್ದೇಶಿಸಿದಂತೆ ಸಮಯಕ್ಕೆ ಸರಿಯಾಗಿ ಹಕ್ಕುಗಳನ್ನು ಕಾಪಾಡಿಕೊಂಡು ಬರಲಾಗುತ್ತಿದೆಯೆ ?
4 ಗ್ರಾಹಕ ಸೇವೆಯಲ್ಲಿ ನಿರೀಕ್ಷಿತ ಮಟ್ಟದಲ್ಲಿ ಕಾರ್ಯ ನಿರ್ವಹಣೆಯನ್ನು ಮಾಡಲಾಗುತ್ತಿದೆಯೆ ?

ಉನ್ನತ ಆಡಳಿತ ಮಂಡಳಿ ತನ್ನ ಸಂಸ್ಥೆಯ ಅನೇಕ ಕಾರ್ಯಗಳ ಪರಿಪಾಲನೆಯಲ್ಲಿ ಚ್ಯುತಿಯನ್ನು ಅರಿಯಲು, ಪರಿಣಾಮಗಳನ್ನು ತಿಳಿಯಲು, ತದನಂತರ ವ್ಯವಸ್ಥೆ ಮತ್ತು ನಿಯಮಾವಳಿಗಳಲ್ಲಿ ಬದಲಾವಣೆಗಳನ್ನು ತರಲು 'ಲೆಕ್ಕ ಪರಿಶೀಲನ ವ್ಯವಸ್ಥೆ'ಯನ್ನು ಸಾಧನವನ್ನಾಗಿ ಉಪಯೋಗಿಸಿಕೊಳ್ಳುತ್ತಿತ್ತು. ಕಾಲಕಾಲಕ್ಕೆ ಸರಿಯಾಗಿ ಸಿಗುವ ತನಿಖಾ ಮಾಹಿತಿಗಳಿಂದ ವ್ಯವಸ್ಥಾಪನಕ್ಕೆ ಇಡೀ ಬ್ಯಾಂಕಿಂಗ್ ವ್ಯವಸ್ಥೆಯ ಬಗ್ಗೆ ಹಿಡಿತ ಸಿಗುತ್ತಿತ್ತು.

ಬ್ಯಾಂಕುಗಳ ರಾಷ್ಟ್ರೀಕರಣವಾದ ಮೇಲೆ ಎಪ್ಪತ್ತರ ದಶಕದಲ್ಲಿ ಬ್ಯಾಂಕುಗಳ ವಹಿವಾಟುಗಳಲ್ಲಿ ಅನೇಕಾನೇಕ ಬದಲಾವಣೆಗಳಾದುವು. ಸಾಮಾಜಿಕ ನಿಯಂತ್ರಣ ಜಾರಿಗೆ ಬಂದು ಬ್ಯಾಂಕುಗಳ ಸೇವೆಯಲ್ಲಿ ಸಣ್ಣ ಕೈಗಾರಿಕೆ, ಸಣ್ಣ ವ್ಯಾಪಾರ, ಕೃಷಿ ಕ್ಷೇತ್ರ ಮುಂತಾದ ಆದ್ಯತಾ ವಲಯಕ್ಕೆ ಉದರಿಯನ್ನು ವ್ಯಾಪಕವಾಗಿಸಬೇಕಾಯ್ತು. ಹೆಚ್ಚಾದ ಕಾರ್ಯಪಾಲಿಕೆಗಳಿಂದ ಆಡಳಿತದಲ್ಲಿ ನಿಯಂತ್ರಣ ಸಾಧಿಸಲು ಪ್ರತಿಯೊಂದು ಶಾಖೆಯ ತನಿಖೆಯನ್ನು ಕಾಲಕಾಲಕ್ಕೆ ನಡೆಸುವುದು ಅನಿವಾರ್ಯವಾಗಿತ್ತು. ಆಗತಾನೆ ರಾಷ್ಟ್ರೀಕರಣಗೊಂಡಿದ್ದ ಬ್ಯಾಂಕುಗಳು ತಮ್ಮವೇ ಆದ ವಿಭಿನ್ನ ರೀತಿ–ನೀತಿಗಳನ್ನು ಹೊಂದಿದ್ದರಿಂದ ಸಮಾನವಾದ ಲೆಕ್ಕ ಪರಿಶೀಲನ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗದಿದ್ದರೂ ಸಹ ಭಾರತೀಯ ಸ್ಟೇಟ್ ಬ್ಯಾಂಕ್ ಅನುಸರಿಸಿದ ವಿಧಾನವನ್ನು ಬಹುಮಟ್ಟಿಗೆ ಅನುಸರಿಸತೊಡಗಿದುವು. ಆದರೆ ಉದ್ದೇಶ ಮಾತ್ರ ಸಾಮಾನ್ಯವಾಗಿತ್ತು.

ಎಪ್ಪತ್ತರ ದಶಕದಲ್ಲಿ ಮಹತ್ತರವಾದ ಬೆಳವಣಿಗೆಯನ್ನು ಕಂಡಂತಹ ಭಾರತೀಯ ಸ್ಟೇಟ್ ಬ್ಯಾಂಕ್ ಲೆಕ್ಕ ಪರಿಶೀಲನ ವ್ಯವಸ್ಥೆಯನ್ನು ಬದಲಾಯಿಸಲು ಯೋಚಿಸಿತು. ಅಂತೆಯೇ 1975ರ ಫೆಬ್ರವರಿಯಲ್ಲಿ ಒಬ್ಬ ಬ್ಯಾಂಕಿನ ಅಧ್ಯಕ್ಷರು ಮತ್ತು ಮೂವರು ಹಿರಿಯ ಅಧಿಕಾರಿಗಳಿದ್ದ ಒಂದು ತಂಡವನ್ನು ಅಧ್ಯಯನಕ್ಕಾಗಿ ನಿಯೋಜಿಸಲಾಯ್ತು. ಈ ತಂಡ ಬ್ಯಾಂಕಿನ ಹಲವಾರು ಶಾಖೆಗಳನ್ನೂ ಹಲವು ಕಛೇರಿಗಳನ್ನೂ ಹಿರಿಯ ಅಧಿಕಾರಿಗಳನ್ನೂ ವೃತ್ತಿಯ ಲೆಕ್ಕಿಗರನ್ನೂ ಭೇಟಿ ಮಾಡಿತು. ತಂಡದ ಸದಸ್ಯರೊಬ್ಬರನ್ನು ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಿಗೂ ಕಳುಹಿಸಿ ಅಲ್ಲಿನ ಲೆಕ್ಕ ಪರಿಶೀಲನ ವ್ಯವಸ್ಥೆಯನ್ನು ಅಭ್ಯಸಿಸಲಾಯ್ತು. 1976ರಲ್ಲಿ ಈ ತಂಡ ತನ್ನ ಅಮೂಲ್ಯ ಸಲಹೆಗಳನ್ನು ನೀಡಿತು. ಅಂತೆಯೇ ಬ್ಯಾಂಕು ತನ್ನ ಶಾಖೆಗಳನ್ನು ಇಂತಿಷ್ಟು ವಲಯಗಳನ್ನಾಗಿ ವಿಭಾಗಿಸಿತು. ಒಂದೊಂದು ವಲಯ ಕಛೇರಿಯೂ ತನ್ನ ವಲಯಕ್ಕೆ ಸೇರಿರುವ ಶಾಖೆಗಳ ಪರೀಕ್ಷೆಯನ್ನು ನಡೆಸುವ ಆದ್ಯತೆ ಮತ್ತು ಜವಾಬ್ದಾರಿಯನ್ನು ಪಡೆಯಿತು. ಇದರಿಂದ ಶಾಖೆಗಳ ಕಾರ್ಯಪಾಲನೆಗಳ ಮೇಲಿನ ಹಿಡಿತ ಪರಿಣಾಮಕಾರಿಯಾಯ್ತು. 5–6 ವರ್ಷಗಳ ಪರೀಕ್ಷಾ ಕಾಲಾವಧಿಯನ್ನು ಪ್ರತಿ ಎರಡು ವರ್ಷಕ್ಕೆ ಇಳಿಸಲಾಯ್ತು. ಇದು ಮುಂದುವರಿದು ವರ್ಷಕ್ಕೊಂದು ಬಾರಿ ಪರೀಕ್ಷೆ ನಡೆಸುವ ಪದ್ಧತಿ ಜಾರಿಗೆ ಬಂದಿತು.

## ಪ್ರಚಲಿತ ಲೆಕ್ಕ ಪರಿಶೋಧನ ಪದ್ಧತಿಗಳು

ಬ್ಯಾಂಕುಗಳಲ್ಲಿ ಈ ಮುಂದಿನಂತೆ ಅನೇಕ ಪದ್ಧತಿಗಳು ಚಲಾವಣೆಯಲ್ಲಿರುತ್ತವೆ.

### 1 ಮುಖ್ಯ ಕಛೇರಿಯ ನಿರೀಕ್ಷಣೆ ಮತ್ತು ಲೆಕ್ಕ ಪರಿಶೋಧನೆ

ಇದು ಚಾಲ್ತಿಯಲ್ಲಿರುವ ಬಹು ಮುಖ್ಯವಾದ ಅಂತರಿಕ ಲೆಕ್ಕ ಪರಿಶೋಧನ ವ್ಯವಸ್ಥೆ. ಬ್ಯಾಂಕಿನ ಶಾಖೆಗಳು ಮುಖ್ಯ ಕಛೇರಿಯ ಲೆಕ್ಕ ಪರಿಶೋಧನ ವ್ಯವಸ್ಥೆಗೆ ಒಳಪಟ್ಟಿರುತ್ತವೆ. ಈ ವ್ಯವಸ್ಥೆಯ ಕಾಲಾವಧಿ ಬ್ಯಾಂಕಿನಿಂದ ಬ್ಯಾಂಕಿಗೆ ಬೇರೆಯೇ ಇರುತ್ತದೆ. ಇದರ ಕಾಲಾವಧಿಯನ್ನು ವ್ಯವಸ್ಥಾಪಕ ಮಂಡಳಿ ನಿರ್ಧರಿಸುತ್ತದೆ. ಇದು ಒಂದು ವರ್ಷ, ಹದಿನೆಂಟು ತಿಂಗಳುಗಳು ಅಥವಾ 2 ವರ್ಷಗಳ ಅವಧಿಯಾಗಿರುತ್ತದೆ. ಇದಕ್ಕಾಗಿ ಮುಖ್ಯ ಕಛೇರಿಯಲ್ಲಿ ಒಂದು ಪ್ರತ್ಯೇಕ ಪರೀಕ್ಷಣ ವಿಭಾಗವೊಂದನ್ನು ತೆರೆಯಲಾಗಿದೆ. ಈ ವಿಭಾಗ ಸಮಯೋಚಿತವಾಗಿ ಶಾಖೆಗಳಲ್ಲಿ ಲೆಕ್ಕ ಪರಿಶೋಧನೆಯನ್ನು ತಮ್ಮ ಬ್ಯಾಂಕಿನ ಹಿರಿಯ ಅಧಿಕಾರಿಗಳು ಹಾಗೂ ಉದ್ಯೋಗಿಗಳಿಂದ ಕೂಡಿದ ತಂಡವನ್ನು ರಚಿಸಿ ನಡೆಸುತ್ತದೆ. ಇದಕ್ಕಾಗಿ ಆಸಕ್ತರಾಗಿರುವವರನ್ನು ಪ್ರತಿ ವರ್ಷ ಅಂತರಿಕವಾಗಿ ಕರೆದು ಆಯ್ಕೆ ಮಾಡಲಾಗುತ್ತದೆ. ಆಯ್ಕೆಯಾದವರಿಗೆ ಹೆಚ್ಚಿನ ಭತ್ಯ ನೀಡಲಾಗುತ್ತದೆ. ಈ ತಂಡ ನಿಯೋಜಿಸಿದ ಶಾಖೆಯ ಪರೀಕ್ಷಣೆಯನ್ನು ಸಂಪೂರ್ಣವಾಗಿ ಮುಗಿಸಿ ನಂತರ ಒಂದು ವರದಿಯನ್ನು ತನ್ನ ಮೇಲಿನ ಅಧಿಕಾರಿಗಳಿಗೆ ಸಲ್ಲಿಸುತ್ತದೆ. ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಮೇಲೆ ಮುಖ್ಯ ಕಛೇರಿಯ ಮುಖ್ಯ ಪರೀಕ್ಷಣ ವಿಭಾಗದ ಅಧಿಕಾರಿಗಳು, ಆ ಶಾಖೆಯ ಕಾರ್ಯಪಾಲನೆಯಲ್ಲಿ ಚ್ಯುತಿ ಉಂಟಾಗಿ ಅದರಿಂದ ಬ್ಯಾಂಕಿನ ವ್ಯವಸ್ಥಾಪನಕ್ಕೆ ಕುಂದು ತರುವಂತಿದ್ದಲ್ಲಿ ಕೂಡಲೆ ಕ್ರಮಗಳನ್ನು ತೆಗೆದುಕೊಳ್ಳುತ್ತಾರೆ. ಇದರಿಂದ ಅಲ್ಲಿ ನಡೆಯಬಹುದಾಗಿದ್ದ ವಂಚನೆಗಳನ್ನು ತಡೆಯಬಹುದಾಗಿದೆ. ಸಣ್ಣ–ಪುಟ್ಟ ತಪ್ಪುಗಳಿದ್ದರೆ ಅವುಗಳನ್ನು ಕಾಲಾನುಕ್ರಮವಾಗಿ ಸರಿಪಡಿಸಲಾಗುತ್ತದೆ. ತನಿಖೆಯ ವರದಿಗಳಿಂದ ಶಾಖೆಗಳ ಕಾರ್ಯಪರಿಪಾಲನಾ ದರ್ಜೆಗಳನ್ನು ನಿರ್ಧರಿಸಲಾಗುತ್ತದೆ. ಹಾಗೂ ಉದ್ಯೋಗಿಗಳ ಕಾರ್ಯತತ್ಪರತೆ ನಡವಳಿಕೆಗಳ ಬಗ್ಗೆ ವರದಿಗಳನ್ನು ಕಳುಹಿಸಲಾಗುತ್ತದೆ.

### 2 ವೃತ್ತಿಯ ಸನ್ನದು ಲೆಕ್ಕಿಗರಿಂದ ಲೆಕ್ಕ ಪರಿಶೋಧನೆ

ನೋಂದಾಯಿಸಲ್ಪಟ್ಟಿರುವ ವೃತ್ತೀಯ ಸಂಸ್ಥೆಗಳು ಸನ್ನದು ಲೆಕ್ಕಿಗರಿಂದ ಲೆಕ್ಕ - ಪರಿಶೋಧನೆಯನ್ನು ಮಾಡುವ ಹಕ್ಕನ್ನು ಪಡೆದಿರುತ್ತವೆ. ಇದರ ಕಾಲಾವಧಿ 1, 2ರಿಂದ 5 ವರ್ಷಗಳ ವರೆವಿಗೂ ಇದ್ದು ವಿಭಿನ್ನವಾಗಿರುತ್ತದೆ.

ಈ ರೀತಿಯ ಸಂಸ್ಥೆಗಳಿಗೆ ಜವಾಬ್ದಾರಿಯನ್ನು ಹೊರಿಸುವ ಹೊಣೆ ವ್ಯವಸ್ಥಾಪಕ ಮಂಡಳಿಗಿರುತ್ತದೆ. ಅನುಭವವಿರುವ ವ್ಯವಸ್ಥಿತವಾಗಿ ಇರುವ ಹಾಗೂ ಉತ್ತಮ ಪರಿಣತಿಯ ಲೆಕ್ಕಿಗರಿರುವ ಸಂಸ್ಥೆಗಳನ್ನು ಆರಿಸಲಾಗುತ್ತದೆ. ಈ ತೆರನಾದ ತನಿಖೆಯನ್ನು ಬ್ಯಾಂಕಿನ ಎಲ್ಲಾ ಶಾಖೆಗಳಲ್ಲೂ ಮಾಡಲಾಗುವುದಿಲ್ಲ. ಆಯ್ಕೆ ಮಾಡಿದ ಕೆಲವು ದೊಡ್ಡ ದೊಡ್ಡ ಶಾಖೆಗಳನ್ನು ಮಾತ್ರ ತನಿಖೆಗೆ ಒಳಪಡಿಸಲಾಗುತ್ತದೆ. ಈ ತರಹದ ತನಿಖೆಗಳೂ ಮುಖ್ಯ ಕಛೇರಿಯ ತನಿಖೆಯ ರೀತಿಯಲ್ಲೇ ಇರುತ್ತವೆ. ಆದರೆ ಅಂತರಿಕ ಪರೀಕ್ಷಣೆಯಂತೆ ಹಲವಾರು ವಿಷಯಗಳಲ್ಲಿ ಪರೀಕ್ಷೆಮಾಡಲು ಅವಕಾಶವನ್ನು ನೀಡಲಾಗುವುದಿಲ್ಲ. ಕೆಲವನ್ನು ಗೌಪ್ಯವಾಗಿಡಲಾಗುತ್ತದೆ. ವೃತ್ತೀಯ ಸಂಸ್ಥೆಗಳೊಡನೆ ಕರಾರನ್ನು ಸಹ ಮಾಡಿಕೊಳ್ಳಲಾಗುತ್ತದೆ. ಈ ಕರಾರಿನಂತೆ ಏನಾದರೂ ದೋಷ ಕಂಡುಬಂದಲ್ಲಿ ಆ ಸಂಸ್ಥೆಯನ್ನು ತೆಗೆದುಹಾಕಲಾಗುತ್ತದೆ. ವ್ಯವಸ್ಥಾಪಕರು ಸನ್ನದು ಲೆಕ್ಕಿಗರಿಗೆ ವೇತನ, ಭತ್ಯ, ಇತ್ಯಾದಿ ಸೌಲಭ್ಯಗಳನ್ನು ಕರಾರಿನಲ್ಲಿ ನಿರ್ಧರಿಸಿರುತ್ತಾರೆ. ಸನ್ನದು ಲೆಕ್ಕಿಗರು ವರದಿಯನ್ನು ಮುಖ್ಯ ಕಛೇರಿಗೆ ಸಲ್ಲಿಸುತ್ತಾರೆ. ವರದಿಯನ್ನು ಹಿಂದಿನ ರೀತಿಯಲ್ಲಿ ಪರಿಶೀಲಿಸಿ ಕ್ರಮ ತೆಗೆದುಕೊಳ್ಳಲಾಗುತ್ತದೆ.

### 3 ದಿಢೀರ್ ಲೆಕ್ಕಪರಿಶೋಧನೆ

ಈ ತರಹದ ಪರೀಕ್ಷಣೆ ಕಾಲಾನುಕ್ರಮದಲ್ಲಿರುವುದಿಲ್ಲ. ಇದನ್ನು ಅತಿ ಶೀಘ್ರವಾಗಿ ಎಲ್ಲಿಂದರಲ್ಲಿ ನಡೆಸಲಾಗುತ್ತದೆ. ಅಲ್ಲದೆ ಕೆಲವೇ ಆಯ್ಕೆಯಾದ ಕ್ಷೇತ್ರಗಳಲ್ಲಿ ಮಾತ್ರ ಮಾಡಲಾಗುತ್ತದೆ. ಇಲ್ಲಿ ಆಂತರಿಕ ಅಧಿಕಾರಿಗಳನ್ನೇ ನೇಮಿಸಲಾಗುತ್ತದೆ. ಇದರಿಂದ ಹಲವಾರು ವಂಚನೆಗಳನ್ನು ಹಿಡಿಯಲು ಅನುಕೂಲವಾಗುವುದು. ಕೆಲವಾರು ಸೂಕ್ತ ಕ್ರಮಗಳನ್ನು ಅಲ್ಲಲ್ಲೇ ತೆಗೆದುಕೊಳ್ಳಲಾಗುವುದು.

### 4 ನಿರೀಕ್ಷಣೆ ಮತ್ತು ಲೆಕ್ಕಪರಿಶೋಧನೆ

ಇದನ್ನು ಸಹ ಮುಖ್ಯ ಕಛೇರಿಯ ವತಿಯಿಂದ ನಡೆಸಲಾಗುತ್ತದೆ. ಕೆಲವು ಆಯ್ದ ಕ್ಷೇತ್ರಗಳ ಪರೀಕ್ಷಣೆಯನ್ನು ಮಾಡಲಾಗುತ್ತದೆ. ಅವುಗಳೆಂದರೆ ನಗದು ವ್ಯವಹಾರ ಪ್ರತಿಭೂತಿ, ಬಂಡವಾಳ ಕ್ಷೇತ್ರಗಳ ವ್ಯವಹಾರ, ಆದಾಯಕರ ಕ್ಷೇತ್ರಗಳು (ಸಾಲಗಳಿಂದ ಬರುವ ಬಡ್ಡಿ, ಡ್ರಾಫ್ಟ್‌ಗಳಿಂದ ಬರುವ ಶುಲ್ಕ ಇತ್ಯಾದಿ) ಇತ್ಯಾದಿ ವರದಿಗಳನ್ನು ಪರೀಕ್ಷಣ ಇಲಾಖೆಗೆ ನೀಡಲಾಗುತ್ತದೆ. ಇದರಿಂದ ಆದಾಯದ ಸೋರುವಿಕೆಯನ್ನು ತಡೆಗಟ್ಟಬಹುದಾಗಿದೆ.

### 5 ಸಹಗಾಮಿ ಲೆಕ್ಕ ಪರಿಶೋಧನೆ

ಎಲ್ಲ ಶಾಖೆಗಳಲ್ಲೂ ಇದನ್ನು ಮಾಡಲಾಗುವುದಿಲ್ಲ. ಮುಖ್ಯವಾಗಿ ದೊಡ್ಡ ದೊಡ್ಡ ಶಾಖೆಗಳಲ್ಲಿ ಸಹಗಾಮಿ ಲೆಕ್ಕಿಗರನ್ನು (ಆಂತರಿಕ) ಕಳಿಸಲಾಗುತ್ತದೆ. ಇದರ ಮುಖ್ಯ ಕೆಲಸ ಶಾಖೆಗಳಲ್ಲಿ ಖಾತೆ ಪುಸ್ತಕಗಳು ತಾಳೆ ಹೊಂದಿರುವುದನ್ನೂ, ದಿನನಿತ್ಯದ ವೋಚರುಗಳು ಸರಿಯಾಗಿರುವುದನ್ನೂ ದೃಢಪಡಿಸಿಕೊಳ್ಳುವುದು.

### 6 ವ್ಯವಸ್ಥಾಪನ ಲೆಕ್ಕ ಪರಿಶೋಧನೆ

ಬ್ಯಾಂಕುಗಳಲ್ಲಿ ಮೇಲ್ದರ್ಜೆಯ ಅಧಿಕಾರಿಗಳೂ ನಿರೀಕ್ಷಣೆಗಳಿಂದ ಹೊರತಲ್ಲ. ಪರೀಕ್ಷಣತಂಡ ಹಿರಿಯ ಮತ್ತು ಉನ್ನತ ದರ್ಜೆಯ ಅಧಿಕಾರಿಗಳಿಂದ ಕೂಡಿರುತ್ತದೆ. ವಲಯ, ಪ್ರಾಂತೀಯ ಮತ್ತು ಮುಖ್ಯ ಕಛೇರಿಗಳ ನೇರದಲ್ಲಿ ಈ ಪರೀಕ್ಷೆ ನಡೆಯುತ್ತದೆ. ವ್ಯವಸ್ಥಾಪನ ಸಂಘಟನಾ ರಚನೆ ಮುಂತಾದವುಗಳು ನಿಗಮ ಧ್ಯೇಯಗಳಿಗೆ ಒಳಪಟ್ಟವೆಯೇ ಎಂಬುದನ್ನು ಪರೀಕ್ಷಿಸಲಾಗುತ್ತದೆ. ಇದು ಯಾವುದೇ ಶಾಖೆಗಳಿಗೆ ಅನ್ವಯಿಸುವುದಿಲ್ಲ. ವ್ಯವಸ್ಥಾಪನದ ಕಾರ್ಯತತ್ಪರತೆಯನ್ನು ಇದು ಪರೀಕ್ಷೆ ಮಾಡುತ್ತದೆ.

### 7 ವ್ಯಯ ವೋಚರ್ ಲೆಕ್ಕ ಪರಿಶೋಧನೆ

ಶಾಖೆಗಳ ವೆಚ್ಚಗಳ ಮೇಲೆ ನಿಯಂತ್ರಣ ಸಾಧಿಸಲು ಆಡಳಿತ ಕಛೇರಿಯವರು ತಮ್ಮದೇ ಆದ ಆಂತರಿಕ ಲೆಕ್ಕಪರಿಶೋಧನ ತಂಡದಿಂದ, ಆ ಶಾಖೆಯಲ್ಲಿ, ಆ ವರ್ಷದಲ್ಲಿ ಆದ ವೆಚ್ಚಗಳ ಬಗ್ಗೆ ತನಿಖೆ ನಡೆಸುತ್ತಾರೆ. ಹಾಗೂ ಆದ ವೆಚ್ಚಗಳು ಸರಿಯಾದ ವೋಚರುಗಳಿಂದ ದೃಢೀಕರಿಸಲ್ಪಟ್ಟಿವೆ ಎಂಬುದನ್ನು ಖಾತ್ರಿ ಮಾಡಿಕೊಳ್ಳುವುದು. ಅಲ್ಲದೆ ಹೆಚ್ಚಿನ ಬಾಬ್ತಿನ ಖರ್ಚುಗಳಿಗೆ ಮುಖ್ಯ ಕಛೇರಿಯಿಂದ ಅನುಮತಿಯನ್ನು ಪಡೆದಿರುವುದರ ಬಗ್ಗೆ ಪರೀಕ್ಷೆ ಮಾಡುವುದು.

### 8 ಆಯವ್ಯಯ ಲೆಕ್ಕ ಪರಿಶೋಧನೆ

ಈ ತನಿಖೆಯನ್ನು ಸಹ ಮುಖ್ಯ ಕಛೇರಿಯವರೇ ನಡೆಸುತ್ತಾರೆ. ಇಲ್ಲಿ ಒಳಪಡುವ ಕ್ಷೇತ್ರಗಳೆಂದರೆ, ಆದಾಯ–ಸಾಲಗಳಿಂದ ಸಂದಾಯವಾಗುವ ಬಡ್ಡಿ, ಹುಂಡಿಗಳಿಂದ ಸಂದಾಯವಾಗುವ ಬಡ್ಡಿ, ಡ್ರಾಫ್ಟುಗಳನ್ನು ಖರೀದಿಸುವುದರಿಂದ ಬರುವ ಶುಲ್ಕ, ದಂಡ ಬಡ್ಡಿ, ಡ್ರಾಫ್ಟ್‌ಗಳಿಂದ ಬರುವ ಶುಲ್ಕ, ತರಗು ಮತ್ತು ಸೋಡಿ, ಹಾಗೆಯೇ ಠೇವಣಿಗಳ ಮೇಲೆ ಮಾಡುವ ವೆಚ್ಚ ಮುಂತಾದವುಗಳು ವ್ಯಯದ ಪಟ್ಟಿಗೆ ಸೇರುತ್ತವೆ. ದೊಡ್ಡ ದೊಡ್ಡ ಶಾಖೆಗಳ ಲಾಭದ ಗಳಿಕೆ ಇಡೀ ಬ್ಯಾಂಕಿನ ಲಾಭ ಅಥವಾ ನಷ್ಟಕ್ಕೆ ಕಾರಣವಾಗುತ್ತದೆ. ಆದ್ದರಿಂದ ಲಾಭ ನಷ್ಟದ ವಿಚಾರದಲ್ಲಿ ಏರುಪೇರಾಗುವುದನ್ನು ತಪ್ಪಿಸುವುದೇ ಈ ತನಿಖೆಯ ಉದ್ದೇಶ.

### 9 ಶಾಸನಬದ್ಧ ಲೆಕ್ಕ ಪರಿಶೋಧನೆ

ಇದನ್ನು ಪ್ರತಿವರ್ಷದ ಕೊನೆಯಲ್ಲಿ ಎಂದರೆ ಡಿಸೆಂಬರ್ 31ರಂದು ವೃತ್ತಿಯ ಸನ್ನದು ಲೆಕ್ಕಿಗರಿಂದ ರಿಸರ್ವ್ ಬ್ಯಾಂಕ್ ನಡೆಸುತ್ತದೆ. ರಿಸರ್ವ್ ಬ್ಯಾಂಕಿಗೆ, ಆಯಾ ಬ್ಯಾಂಕುಗಳ ಮುಖ್ಯ ಕಛೇರಿಗಳು ಶಾಸನಬದ್ಧ ಲೆಕ್ಕ ಪರಿಶೋಧನೆಯನ್ನು ಮಾಡಲು ಕೆಲವು ಶಾಖೆಗಳನ್ನು ಆಯ್ಕೆಮಾಡಿ ಪಟ್ಟಿಯನ್ನು ಕಳಿಸುತ್ತದೆ. ಈ ತನಿಖೆಯಲ್ಲಿ ಶಾಖೆಗಳ ಜಮಾ ಖರ್ಚು ಪಟ್ಟಿ, ಆಯವ್ಯಯಗಳ ತಃಖ್ತೆ, ಲಾಭ ನಷ್ಟಗಳ ಖಾತೆ, ಇವುಗಳ ಸಂಪೂರ್ಣ ತಾಳೆ ನೋಡುವುದು. ಅಲ್ಲದೆ ಆ ಶಾಖೆಗಳ ಪ್ರತಿಯೊಂದು ಖಾತೆಯ ಪರಿಶೋಧನೆ ನಡೆಸುವುದು, ಇದರ ಮತ್ತೊಂದು ಮುಖ್ಯವಾದ ಕಾರ್ಯ. ಈ ತನಿಖೆಯ ವರದಿಯನ್ನು ಮುಖ್ಯ ಕಛೇರಿ ಪರಿಶೀಲಿಸುವುದು, ಅಲ್ಲದೆ ಈ ವರದಿ ರಿಸರ್ವ್ ಬ್ಯಾಂಕನ್ನು ಸಹ ಸೇರುವುದು.

### 10 ಶಾಖಾ ಲೆಕ್ಕ ಪರಿಶೋಧನೆ

ಇದನ್ನು ಸಹ ರಿಸರ್ವ್ ಬ್ಯಾಂಕ್ ವೃತ್ತೀಯ ಸನ್ನದು ಲೆಕ್ಕಿಗರಿಂದ ಆಯ್ಕೆ ಮಾಡಿದ ಕೆಲವೇ ಕ್ಷೇತ್ರಗಳಲ್ಲಿ, (ಹೆಚ್ಚಾಗಿ ಸ್ಥಿರ/ಚರಾಸ್ತಿಗಳ ಮೇಲೆ ಪಡೆದಿರುವ ಸಾಲ) ಶಾಖೆಗಳಲ್ಲಿ ನಡೆಸುತ್ತದೆ.

### 11 ರಿಸರ್ವ್ ಬ್ಯಾಂಕ್ ಲೆಕ್ಕ ಪರಿಶೋಧನೆ

ಭಾರತೀಯ ರಿಸರ್ವ್ ಬ್ಯಾಂಕ್ ತನ್ನದೇ ಆದ ನಿರೀಕ್ಷಕರ ತಂಡದಿಂದ ಶಾಖೆಗಳಲ್ಲಿ ಪರಿಶೋಧನೆಯನ್ನು ನಡೆಸುತ್ತದೆ. ಇಲ್ಲಿ ಶಾಖೆಗಳ ಹಣಕಾಸಿನ ಸ್ಥಿತಿಯನ್ನು, ವಿಧಿವತ್ತಾದ ಸಾಲಗಳು ಮತ್ತು ಚಲಾರ್ಥ ಕೋಠಿ ಬಗ್ಗೆ ಪರೀಕ್ಷೆ ನಡೆಸಲಾಗುತ್ತದೆ.

### 12 ಸರ್ಕಾರಿ ಲೆಕ್ಕ ಪರಿಶೋಧನೆ

ಸರ್ಕಾರ ನಿಯೋಜಿಸಿರುವ ಲೆಕ್ಕಿಗರು ಕೆಲವು ಸಲ ಸರ್ಕಾರಿ ವ್ಯವಹಾರದ ಬಗ್ಗೆಯಾಗಲಿ, ಸರ್ಕಾರ ಅಪೇಕ್ಷಿಸಿದ ಕೆಲವು ಕ್ಷೇತ್ರಗಳ ಬಗ್ಗೆಯಾಗಲಿ ಲೆಕ್ಕ ಪರಿಶೋಧನೆಯನ್ನು ನಡೆಸುತ್ತಾರೆ.

### 13 ಮಹಾ ಲೆಕ್ಕಿಗರ ಕಛೇರಿಯವರ ಲೆಕ್ಕ ಪರಿಶೋಧನೆ

ಇದನ್ನು ಮುಖ್ಯವಾಗಿ ಸರ್ಕಾರಿ ವ್ಯವಹಾರ ನೋಡಿಕೊಳ್ಳುವ ಶಾಖೆಗಳಲ್ಲಿ ನಡೆಸಲಾಗುತ್ತದೆ. ಈ ತಂಡವನ್ನು ಮಹಾ ಲೆಕ್ಕಿಗರ ಕಛೇರಿಯವರೇ ನಿಯೋಜಿಸುತ್ತಾರೆ.

## ಇಂದಿನ ಲೆಕ್ಕ ಪರಿಶೋಧನ ವ್ಯವಸ್ಥೆಯಲ್ಲಿ ಕಂಡುಬರುವ ಕುಂದುಕೊರತೆಗಳು

ಹಲವಾರು ಅಡ್ಡಿ ಆತಂಕಗಳು ಇದ್ದಾಗ್ಯೂ ಸಹ ಇಂದಿನ ಲೆಕ್ಕಪರಿಶೋಧನ ವ್ಯವಸ್ಥೆಯಲ್ಲಿ ಈ ಕೆಳಗಿನ ಕುಂದು ಕೊರತೆಗಳನ್ನು ಗಮನಿಸಬಹುದಾಗಿದೆ:

1 ನಿರೀಕ್ಷಣಾಧಿಕಾರಿಗಳು ಬ್ಯಾಂಕಿನ ಆಂತರಿಕ ಅಧಿಕಾರಿಗಳೇ ಆದ್ದರಿಂದ ಅವರು ಮುಂದೆ ಬೇರೆ ಯಾವುದೋ ಶಾಖೆಯ ಅಧಿಕಾರಿಯಾಗುವುದರಿಂದ, ತಮ್ಮ ಸಹೋದ್ಯೋಗಿಯ ಮೇಲಿನ ಸ್ನೇಹದಿಂದ ನೇತ್ಯರ್ಥಕ ವರದಿಯನ್ನು ನೀಡಲು ಹಿಂಜರಿಯುತ್ತಿದ್ದಾರೆ. ಇದರಿಂದ ಲೆಕ್ಕ ಪರಿಶೀಲನೆಯ ಮುಖ್ಯ ಧ್ಯೇಯವೇ ಹಿಂದಾಗುತ್ತಿದೆ.

2 ನಿರೀಕ್ಷಣಾಧಿಕಾರಿಗಳಿಗೆ ತನಿಖೆ ಮಾಡಲು ನೀಡಿದ ಕಾಲಾವಧಿ ನಿಶ್ಚಿತ ಮತ್ತು ನಿಯಮಿತವಾದ್ದರಿಂದ ಆ ಕಾಲಾವಧಿಯಲ್ಲಿ ಪರಿಪೂರ್ಣವಾಗಿ ಎಲ್ಲ ಕ್ಷೇತ್ರಗಳಲ್ಲೂ ತನಿಖೆ ಮಾಡಲು ಸಾಧ್ಯವಾಗುವುದಿಲ್ಲ.

3 ಸರ್ವೇ ಸಾಮಾನ್ಯವಾದ ಪರಿಶೋಧನ ವಿಧಾನವನ್ನು ಅನುಸರಿಸಲಾಗುತ್ತಿಲ್ಲ.

4 ನಿರೀಕ್ಷಣಾಧಿಕಾರಿಗಳು ನೇತ್ಯರ್ಥಕ ವರದಿಯನ್ನು ನೀಡಿ, ತಾವು ಮುಂಬರುವ ದೀರ್ಘ ವಿಚಾರಣೆಗಳಿಗೆ ಸಿಲುಕಿಕೊಳ್ಳುವ ಜವಾಬ್ದಾರಿ ಬೇಡವೆಂದು ಹಿಂಜರಿಯುತ್ತಿದ್ದಾರೆ.

5 ವೃತ್ತಿಯ ಸನ್ನದು ಲೆಕ್ಕಿಗರಿಗೆ ಆ ಬ್ಯಾಂಕಿನ ವಹಿವಾಟುಗಳು ಅರ್ಥವಾಗದಿದ್ದರೂ ಸಹ, ಸಂಪೂರ್ಣವಾಗಿ ಕೆಲಸ ನಿರ್ವಹಿಸಲಾರದೆ ಬರಿಯ ಹಣಕ್ಕೋಸ್ಕರ ಕೆಲಸ ಮಾಡು ವಂತಾಗಿದೆ.

6 ಶಾಖೆಗಳಲ್ಲಿ ನಿರೀಕ್ಷಣಾಧಿಕಾರಿಗಳಿಗೆ ಸರಿಯಾದ ಸಹಕಾರವನ್ನು ನೀಡಲಾಗುತ್ತಿಲ್ಲ.

7 ನಿರೀಕ್ಷಕರ ವರದಿಗಳ ಮೇಲೆ ತಕ್ಕ ಕ್ರಮ ತೆಗೆದುಕೊಳ್ಳುವಲ್ಲಿ ನಿಧಾನ ಪ್ರವೃತ್ತಿ ಕಂಡು ಬರುತ್ತಿದೆ.

8 ವ್ಯವಸ್ಥಾಪನೆ ಲೆಕ್ಕ ಪರಿಶೋಧನೆಯನ್ನು ದೈನಂದಿನ ಕಾರ್ಯಪಾಲನೆಯಂತೆ ಪರಿ ಗಣಿಸಿ, ಹೆಚ್ಚಿನ ಮಹತ್ವವನ್ನು ನೀಡುತ್ತಿಲ್ಲ.

9 ಕೆಲವು ಅಧಿಕಾರಿಗಳು ಇಚ್ಛೆ ಇಲ್ಲದಿದ್ದರೂ ಸಹ ಬಲವಂತವಾಗಿ ನಿರೀಕ್ಷಣಾಧಿಕಾರಿಗಳಾಗು ತ್ತಿರುವುದರಿಂದ ಅವರು ತೆರೆದ ಮನಸ್ಸಿನಿಂದ ಲೆಕ್ಕ ಪರಿಶೋಧನೆಯನ್ನು ಮಾಡಲಾಗುವು ದಿಲ್ಲ.

10 ಹಲವಾರು ನಿರೀಕ್ಷಣಾಧಿಕಾರಿಗಳು ಆಹಾರ, ಹವಾಮಾನ, ಭಾಷೆ ಮತ್ತು ಸಾರಿಗೆಯ ಅವ್ಯವಸ್ಥತೆಯಿಂದ ಸರಿಯಾದ ಉತ್ಸಾಹ ತೋರಲಾಗುತ್ತಿಲ್ಲ.

11 ಶಾಖೆಗಳು ಹತ್ತಾರು ತನಿಖೆಗಳನ್ನು ವರ್ಷದಲ್ಲಿ ಎದುರಿಸಬೇಕಾದ್ದರಿಂದ ಶಾಖಾ ಪ್ರಗತಿಪರ ಚಟುವಟಿಕೆಗಳಿಗೆ ಗಮನವೀಯಲಾಗುತ್ತಿಲ್ಲ.

12 ಸರ್ಕಾರದ ನೀತಿಯಿಂದ ದುರ್ಬಲ ವರ್ಗದವ ರಿಗೆ ಸಾಲದ ವಿತರಣೆಯಲ್ಲಿ ಅನೇಕ ಮಧ್ಯ ವರ್ತಿಗಳ ಮತ್ತು ರಾಜಕೀಯದ ಒತ್ತಡದಿಂದ ಹಿಡಿತಕ್ಕೆ ಸಿಗಲಾರದಷ್ಟು ಖಾತೆಗಳು ವಿವಿಧ ಯೋಜನೆಗಳಡಿಯಲ್ಲಿ ಆರಂಭವಾಗಿರುವುದ ರಿಂದ ಶಾಖೆಗಳಲ್ಲಿ ನಿರೀಕ್ಷಣಾಧಿಕಾರಿಗಳಿಂದ ಉತ್ತಮ ವರದಿಯನ್ನು ಹೊಂದಲು ಸಾಧ್ಯ ವಾಗುತ್ತಿಲ್ಲ.

### ಪರಿಹಾರಾತ್ಮಕ ಕ್ರಮಗಳು

1 ಪ್ರಸ್ತುತ ಪದ್ಧತಿಗಳನ್ನು ಕೊನೆಗಾಣಿಸಿ, ಬ್ಯಾಂಕುಗಳಿಗೆ ತಮ್ಮವೇ ಆದ ನಿರೀಕ್ಷಣ ಇಲಾಖೆಯನ್ನು ಹೊಂದುವ ಹಕ್ಕನ್ನು ಕಸಿದು ಕೊಳ್ಳಬೇಕು.

2 ಭಾರತೀಯ ರಿಸರ್ವ್ ಬ್ಯಾಂಕ್ ಲೆಕ್ಕ ಪರಿ ಶೀಲನೆಗೆಂದೇ ಒಂದು ಪ್ರತ್ಯೇಕ ನಿರೀಕ್ಷಣ ವಿಭಾಗವನ್ನು ತೆರೆಯಬೇಕು. ಎಲ್ಲ ಬ್ಯಾಂಕು ಗಳ ತನಿಖೆಗಳನ್ನು ನಿರ್ವಹಿಸುವ ಜವಾಬ್ದಾರಿ ಯನ್ನು ಈ ವಿಭಾಗ ಹೊತ್ತುಕೊಳ್ಳಬೇಕು.

3 ಭಾರತೀಯ ರಿಸರ್ವ್ ಬ್ಯಾಂಕ್ ನೇಮಕ ಮಾಡಿದ ತಂಡದಿಂದ ಪ್ರತಿವರ್ಷವೂ ಬ್ಯಾಂಕಿನ ಎಲ್ಲ ಶಾಖೆಗಳಲ್ಲೂ, ಎಲ್ಲಾ ಕ್ಷೇತ್ರ ಗಳಲ್ಲೂ ಪರೀಕ್ಷೆಯನ್ನು ನಡೆಸಬೇಕು.

[11ನೇ ಪುಟ ನೋಡಿ]

# ಬ್ಯಾಂಕಿನಲ್ಲಿ ಗ್ರಾಹಕರ ಬರವಣಿಗೆಯ ಪಾತ್ರ

**ಬ್ಯಾಂಕುಗಳಲ್ಲಿ ಬಹುತೇಕ ವಹಿವಾಟುಗಳು ನಡೆಯುವುದು ಅವುಗಳಿಗೆ ಪ್ರತ್ಯೇಕವಾಗಿ ಗೊತ್ತುಮಾಡಲಾಗಿರುವ ಅಚ್ಚಾದ ನಮೂನೆಗಳನ್ನು ಭರ್ತಿಮಾಡುವುದರ ಮೂಲಕ. ಅನಕ್ಷರಸ್ಥರಾದ ಗ್ರಾಹಕರು ಇವನ್ನು ತುಂಬಲಾರರೆಂಬುದು ನಿಜ. ಈ ನಮೂನೆಗಳು ಗ್ರಾಹಕರಿಗೆ ಗೊತ್ತಿಲ್ಲದ ಭಾಷೆಯಲ್ಲಿದ್ದಾಗಲೂ ಅವರು ಅವನ್ನು ತುಂಬಲಾರರು. ಅಂಥ ಸಂದರ್ಭಗಳಲ್ಲಿ ಸಂಬಂಧಪಟ್ಟ ಬ್ಯಾಂಕ್ ಉದ್ಯೋಗಿಗಳೇ ಅವನ್ನು ತುಂಬುವುದು ವಾಡಿಕೆಯಾಗಿ ಬಂದಿದೆ. ಆದರೆ ಅಕ್ಷರಸ್ಥರಾದ ಹಾಗೂ ನಮೂನೆಗಳ ಭಾಷೆಯನ್ನು ಬಲ್ಲ ಗ್ರಾಹಕರೂ ಅವನ್ನು ಸಾಮಾನ್ಯವಾಗಿ ತುಂಬುವುದಿಲ್ಲ. ಅವನ್ನು ತುಂಬುವುದು ತಮ್ಮ ಮರ್ಯಾದೆಗೆ ಕಡಿಮೆಯೆಂದೇ ಅನೇಕರು ಭಾವಿಸುತ್ತಾರೆ. ಚಿಕ್ಕೆ ಸಾಲಿನ ಮೇಲೆ ಕಣ್ಮುಚ್ಚಿ ಸಹಿ ಹಾಕುವುದೇ ಅನೇಕರ ಕ್ರಮ !**


**ಎಸ್. ಗಿರೀಶ ಪುತ್ರಾಯ**

ಶಾಖಾ ವ್ಯವಸ್ಥಾಪಕ
ಮಲಪ್ರಭಾ ಗ್ರಾಮೀಣ ಬ್ಯಾಂಕ್
ಹಿಡಕಲ್ ಕಟ್ಟೆ, ಹುಕ್ಕೇರಿ ತಾಲ್ಲೂಕು. ಬೆಳಗಾಂ ಜಿಲ್ಲೆ


ಇಂದು ಬ್ಯಾಂಕ್ ಶಾಖೆಗೆ ಬರುವ ಗ್ರಾಹಕರಲ್ಲಿ ಬರೆಯಬಲ್ಲವರು, ಬರೆಯಲಿಕ್ಕಲ್ಲದವರು ಎಂಬ ಎರಡು ಬಗೆಯವರನ್ನು ಕಾಣಬಹುದು. ಬರವಣಿಗೆ ಕಲಿತೂ ಬ್ಯಾಂಕಿನಲ್ಲಿ ಅದನ್ನು ಬಳಸದಿರುವ ಅನೇಕ ಗ್ರಾಹಕರ ಮನೋಭಾವ ಹೇಗಿದೆಯೆಂದರೆ, ಬ್ಯಾಂಕಿನ ನಮೂನೆಗಳನ್ನು ತಾವೇ ತುಂಬುವುದು ತಮ್ಮ ಪ್ರತಿಷ್ಠೆಗೆ ಕುಂದು ; ಅದು ಬ್ಯಾಂಕಿನವರ ಸೇವೆ, ಕೆಲಸ ಎಂಬಂಥದು. ಮತ್ತೆ ಕೆಲವರಿಗೆ ತಾವು ಬರೆಯಬಹುದು ಎಂಬ ಆತ್ಮವಿಶ್ವಾಸ ಹಾಗೂ ಪ್ರೇರಣೆಯೇ ಇರದು. ಅನಕ್ಷರತೆ ಇಂದು ದೇಶ ವ್ಯಾಪಿ. ಬಹು ಹಿಂದಿನಿಂದಲೂ ಜಮೀನುದಾರ ನಿಗೋ ಅವನ ಗುಮಾಸ್ತನಿಗೋ ಶಾನುಭೋಗ ನಿಗೋ ಆಡಳಿತ ಸಿಬ್ಬಂದಿಗೋ ಅನಕ್ಷರಸ್ಥ ತನ್ನ ಮುಗ್ಧ ಮಿದುಳನ್ನು ಒತ್ತೆ ಇಟ್ಟವ ! ಈತನ ಕೈ, ಮಿದುಳುಗಳೆಂದರೆ ಇವರೇ ! ನಂಬಿಕೆಯ ಮೇಲಿನ ವ್ಯವಹಾರ ಕೂಡ ಇಲ್ಲಿ ಗಮನಾರ್ಹ ಪಾತ್ರ ವಹಿಸುತ್ತದೆ. ಆಂಗ್ಲರು ನಮ್ಮ ದೇಶಕ್ಕೆ ಕಾಲಿಡುವ ವರೆಗೂ ಸಾಮಾನ್ಯ ಪ್ರಜೆಗೆ ರಸೀತಿ, ಪ್ರಮಾಣಪತ್ರ, ಅರ್ಜಿ, ಬರೆವಣಿಗೆ ಇವುಗಳ ಪರಿ ಚಯವೇ ಇರಲಿಲ್ಲ ! ಇಷ್ಟೇಕೆ ? ಇಂದು ಕೂಡ ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಸಾವಿರಾರು ರೂಪಾಯಿ ಬೆಲೆಬಾಳುವ ಚಿನ್ನ, ಬೆಳ್ಳಿಯ ಆಭರಣಗಳ ತಯಾರಿಕೆಯಲ್ಲಿ ನಾವು ಅಕ್ಕಸಾಲಿಗ (ಪತ್ತಾರ) ನೊಂದಿಗೆ ನಡೆಸುವ ವ್ಯವ ಹಾರ ನಂಬಿಕೆ–ಪ್ರಾಮಾಣಿಕತೆಯ ಆಧಾರದ ಮೇಲೆ ಅಲ್ಲವೆ ? ಜಮೀನುದಾರರ ಕಪಿಮುಷ್ಟಿಗೆ ಇಂಥ ನಂಬಿಕೆ ಆಧಾರ ಹೊಂದಿ ವ್ಯವಹಾರ ಮಾಡುವ ರೈತ ಮೊನ್ನೆ ಮೊನ್ನೆಯವರೆಗೂ ಸುಳ್ಳು, ಮೋಸ, ಶೋಷಣೆಗಳಿಗೆ ಬಲಿಪಶುವೂ ಆಗಿದ್ದ ! ಇಂಥ ಹಿನ್ನೆಲೆ ನಮ್ಮ ಬರೆವಣಿಗೆ ಬಾರದ ಗ್ರಾಹಕನದು.

### ಇಂಗ್ಲಿಷಿನ ಪಾರುಪತ್ಯ

ನಮ್ಮ ಬ್ಯಾಂಕುಗಳು ಇಂಗ್ಲಿಷರ ಕಾಲದಲ್ಲಿ ಆರಂಭ ಗೊಂಡು ಇಂದಿನವರೆಗೂ ನಮ್ಮ ನಡುವೆ ಒಂದಾ ಗಿದ್ದರೂ ವ್ಯವಹಾರ, ಲೆಕ್ಕ ಎಲ್ಲ ಆಂಗ್ಲ ಪದ್ಧತಿ ಯದು. ಭಾಷೆಯ ವಿಚಾರದಲ್ಲಂತೂ ಇಂದಿಗೂ ನಮ್ಮಲ್ಲಿ ಇಂಗ್ಲಿಷಿನದೇ ಪಾರುಪತ್ಯ. ಭಾರತೀಯ

ಗ್ರಾಹಕನಿಗೆ ಇಂಥ ಅಡ್ಡಗೋಡೆಗಳು ಹಲವಾರು. ಒಂದು ಕಾಲಕ್ಕೆ ಬ್ಯಾಂಕು ಶ್ರೀಮಂತರ ಸೊತ್ತು. ಇವು ತೀರ ಕೊನೆಯ ಬಡವರನ್ನು ಮುಟ್ಟತೊಡಗಿದ್ದು ಈಚೆಗೆ, ರಾಷ್ಟ್ರೀಕರಣವಾದ ಅನಂತರ.

ಭಾರತೀಯ ಬ್ಯಾಂಕರುಗಳು ತಮ್ಮ ಗ್ರಾಹಕನ ಪಾಲಿನ ಬರವಣಿಗೆಯ ಕೆಲಸವನ್ನು ಸೌಜನ್ಯಪೂರಿತ ಸೇವೆ, ಕರ್ತವ್ಯಗಳೆಂದು ತಾವೇ ನಿರ್ವಹಿಸಬೇಕಾಗಿ ಬಂದಿದೆ. ಬ್ಯಾಂಕಿನಲ್ಲಿ ಗ್ರಾಹಕರು ಸ್ವತಃ ಬರೆದು ಕೊಡುವಂಥ ನಮೂದುಗಳು ಸಾಮಾನ್ಯವಾಗಿ ಮೂರೇ : ಚೆಕ್ಕು, ಚಲನ್ನು ಮತ್ತು ಸಾಲ ಬೇಡುವ ಅರ್ಜಿ. ಕಾನೂನಿನ ದೃಷ್ಟಿಯಿಂದ ದಸ್ತಾವೇಜನ್ನು ಗ್ರಾಹಕ ಬ್ಯಾಂಕರನಿಗೆ ಬರೆದುಕೊಡಬೇಕು. ಸಾಕ್ಷಿ ನೀಡುವಾಗ ಶಾಖಾ ವ್ಯವಸ್ಥಾಪಕರಿಗೆ ವಕೀಲರು, 'ಸಾಲ ಪಡೆದುಕೊಂಡಾಗ ಸಾಲಗಾರ ಏನನ್ನು ಬರೆದುಕೊಟ್ಟ' ಎಂದೇ ಕೇಳುವರು.

## ಸೇವೆಯ ಉತ್ಪ್ರೇಕ್ಷೆ

ಗ್ರಾಹಕ ತುಂಬಬೇಕಾದ ನಮೂನೆಗಳನ್ನು ಬ್ಯಾಂಕರರೇ ತುಂಬುವುದು ಸಾಮಾನ್ಯವಾಗಿದೆ. ಬ್ಯಾಂಕ್ ಸಿಬ್ಬಂದಿಯಲ್ಲಿ ಅದು ಸೌಜನ್ಯ, ತಮ್ಮ ಕರ್ತವ್ಯ ಎಂಬ ಭಾವನೆ ಇದೆ. ಗ್ರಾಹಕ ಬರೇ ಗ್ರಾಹಕನ ಸ್ಥಾನದಲ್ಲಿ ನಿಲ್ಲುವುದಕ್ಕಿಂತ ಹೆಚ್ಚಾಗಿ 'ಸೇವೆ'ಯೇ ಮಾರಾಟದ ಸರಕಾಗಿರುವ ಬ್ಯಾಂಕಿನಲ್ಲಿ ವ್ಯವಹಾರ ಮುಖ್ಯವಾಗಿ ಮಾನವೀಯ ಸಂಬಂಧಗಳ ನೆಲೆಯಲ್ಲಿ ಸಾಗುವುದರಿಂದ ಇಂದಿಗೂ ಬ್ಯಾಂಕರನು ಗ್ರಾಹಕರಿಗೆ ನೀಡುವ ಸೇವೆಗಳಲ್ಲಿ 'ಬರವಣಿಗೆಯ ಸೇವೆ'ಯೂ ಮುಖ್ಯ. ಈ ಸೇವೆ ನೀಡಲೇಬೇಕು ಎಂಬುದು ಬ್ಯಾಂಕರರ ಸದ್ಯದ ನಿಲುವು.

ಬ್ಯಾಂಕರರ ಈ ಸೇವಾ ಮನೋಭಾವ ಹೃತ್ಪೂರ್ವಕವಾಗಿ ಮೆಚ್ಚತಕ್ಕದ್ದೇ. ಬ್ಯಾಂಕರ್ ನೀಡುವ ಅನೇಕ ಸೇವೆಗಳಲ್ಲಿ ಈ ಬರವಣಿಗೆಯ ಸೇವೆ ಸಹಾ ಸೇರಿದೆ ಎಂಬುದು ನಿಜ. ಆದರೆ ಈ ಸೇವೆ ಬ್ಯಾಂಕರನ ಯಾವ ಕಾನೂನು ಪುಸ್ತಕದಲ್ಲೂ, ಸೇವಾನಿಯಮಗಳಲ್ಲೂ ಉಲ್ಲೇಖಗೊಂಡಿಲ್ಲ.

## ವಿಪರ್ಯಾಸ

ದೇಶದ ಅನೇಕ ಸಂಗತಿಗಳಲ್ಲಿ ಒಂದಕ್ಕೊಂದು ಹೊಂದಿಕೆಯಾಗದ ಅನೇಕ ಅಸಮರ್ಪಕತೆ, ವಿಪರ್ಯಾಸ, ಅಸಂಬದ್ಧತೆಗಳನ್ನು ನಾವು ಎಲ್ಲ ಕಡೆ ಕಾಣುತ್ತೇವೆ. ಉದಾಹರಣೆಗೆ ತೀರ ಇತ್ತೀಚೆಗೆ ಪ್ರಪ್ರಥಮ ಅಂತರಿಕ್ಷಯಾತ್ರಿ ಶ್ರೀ ರಾಕೇಶ್‌ಶರ್ಮ ಪೃಥ್ವಿಯನ್ನು ಬಿಟ್ಟು ಅಂತರಿಕ್ಷಕ್ಕೆ ಹಾರಿ ಭೂಪ್ರದಕ್ಷಿಣೆ ಬರುವಂಥ ವೈಜ್ಞಾನಿಕ ಮುನ್ನಡೆ, ಮತ್ತೊಂದು ಕಡೆ ನಿರಕ್ಷರತೆಯ ಅಜ್ಞಾನ. ಬ್ಯಾಂಕಿಂಗ್ ವಲಯದಲ್ಲಿ ಒಂದು ಕಡೆ ಗಣಕೀಕರಣ, ಟೆಲರ್ ಪದ್ಧತಿ ಕುರಿತು ಚಿಂತನೆ, ಚೆಕ್ ಪಡೆದು ಹಣ ನೀಡುವ ಯಂತ್ರದ ಹೊಸ ಆವಿಷ್ಕಾರ, ಉದರಿ ಕಾರ್ಡುಗಳು—ಹೀಗೆ ಹೊಸತನದೆಡೆಗೆ ದಾಪುಗಾಲು. ಮತ್ತೊಂದೆಡೆ, ಇದೇ ದೇಶದ ಕೊಟ್ಟಕೊನೆಯ ಕುಗ್ರಾಮದಲ್ಲಿ ಬ್ಯಾಂಕರ ತನ್ನ ಗ್ರಾಹಕನ ಎಡಗೈಅನ್ನು ತನ್ನ ವಶಕ್ಕೆ ಪಡೆದುಕೊಂಡು ಅಗತ್ಯವಿರುವ ಕಡೆ ಹೆಬ್ಬೆಟ್ಟು ಗುರುತು ಹಾಕಿಸಿಕೊಳ್ಳುತ್ತ ಇರುವ ದೃಶ್ಯ !

ಹೊಸತನ ಬಯಸುವ ಎಲ್ಲ ಚಿಂತಕ ಬ್ಯಾಂಕರುಗಳು ಈ ಬಗ್ಗೆ ಬಹಳ ಗಂಭೀರವಾಗಿ ವಿಚಾರ ಮಾಡಬೇಕು. ಅನಕ್ಷರಸ್ಥನಾದ ಗ್ರಾಹಕನಿಗೆ ಕೊಡಬಹುದಾದ ಈ ಸ್ವಯಂ ಇಚ್ಛೆಯ ಮಾನವೀಯ ಸೇವೆಯನ್ನು ಎಲ್ಲರೂ ಮೆಚ್ಚಬೇಕು. ಇಂಥ ಸೇವೆ ಮಾಡಬಯಸುವ, ಮಾಡುತ್ತಿರುವ ಭಾರತೀಯ ಬ್ಯಾಂಕರುಗಳು ಅಭಿನಂದನಾರ್ಹರು. ಆದರೆ ಇದರ ಜೊತೆಗೇ ಮೂಡುವಂಥ ಇನ್ನೊಂದು ಅನಿಸಿಕೆಯಿದೆ. ಇಂಥ ಸೇವೆ ಎಷ್ಟು ದಿನ ? ಎಲ್ಲವೂ ಆಧುನಿಕ ಗಾಳಿಗೆ ಮೈಯೊಡ್ಡಿ ಹೊಸ ಆವಿಷ್ಕಾರ ಪಡೆಯತೊಡಗಿದಾಗ ನಮ್ಮ ಗ್ರಾಹಕ ಎರಡು ನೂರು ವರ್ಷಗಳ ಹಿಂದೆ ಎಲ್ಲಿ ನಿಂತಿದ್ದನೋ ಇನ್ನೂ ಅಲ್ಲೇ, ಅದೇ ಸ್ಥಿತಿಯಲ್ಲೇ ಉಳಿಯಬೇಕೆ ? ತನ್ನ ಪಾಲಿನ ಬರವಣಿಗೆಯನ್ನು ತಾನೇ ಮಾಡಲಾರದ ಅಸಹಾಯಕತೆಯಲ್ಲಿಯೇ ಇನ್ನೂ ಅವನು ಮುಂದುವರಿಯಬೇಕೆ ? "ಕುದುರೆ ಕಂಡರೆ ಕಾಲುನೋವು" ಎಂಬ ಗಾದೆಯಂತೆ, ಇಂದಿಗೂ ಮುಂದಿಗೂ ಸೌಜನ್ಯಪೂರ್ಣ ಕರ್ತವ್ಯ ಹಾಗೂ ಮಾನವೀಯ ಸೇವೆಸಲ್ಲಿಸುವ 'ಬ್ಯಾಂಕರು' ಎಂಬ 'ಕುದುರೆ' ಇರುವವರೆಗೂ ನಮ್ಮ ಗ್ರಾಹಕನಿಗೆ 'ಬರವಣಿಗೆ' ಎಂಬ ನಡೆಯುವ ಶ್ರಮ ಬೇಡವಾಗುತ್ತದೆ. ಈ ತರ್ಕ ಅಮಾನವೀಯ ಎಂಬ ಅನಿಸಿಕೆ ಸಹಾ ನಮ್ಮ ಬ್ಯಾಂಕರುಗಳಲ್ಲಿದೆ. ಅಂಚೆ ಕಛೇರಿಗಳಲ್ಲಿ, ಬಸ್ಸು ಹಾಗೂ ನಿಲ್ದಾಣಗಳ ಮುಂಗಡ ತಿಕೀಟು ಕಾದಿರಿಸುವ ಚೀಟಿ/ಅರ್ಜಿ ಬರೆಯುವಾಗ, ಎಂ. ಓ. ಫಾರ್ಮು ತುಂಬುವಾಗ ಉಪನೋಂದಣಿ ಕಛೇರಿಯಲ್ಲಿ ದಸ್ತಾವೇಜು ಬರೆಯುವಾಗ ಗ್ರಾಹಕರೇ ತಮ್ಮ ತಮ್ಮ ಕೆಲಸ ಮಾಡಿಕೊಳ್ಳುವುದಿಲ್ಲವೆ ? ಇದನ್ನು ಗ್ರಾಹಕ ಸಹಜವಾಗಿ ಸ್ವೀಕರಿಸಿಲ್ಲವೆ ? ಹಾಗಿದ್ದರೆ ಈ ಇಲಾಖೆಯ ಸಿಬ್ಬಂದಿವರ್ಗ ಅಮಾನವೀಯತೆ ಉಳ್ಳವರೆ ? ಬ್ಯಾಂಕು ಸಿಬ್ಬಂದಿ ಮಾತ್ರ 'ಸಕ್ಕರೆ ಹೃದಯ' ಹೊಂದಿದವರೆ ? ಎಂಬ ಪ್ರಶ್ನೆ ಏಳುತ್ತದೆ. ಇಂದು ಸಮಾಜದ ಟೀಕೆ, ವಿಮರ್ಶೆಗಳಿಗೆ ಗುರಿಯಾದ ಇತರ ಎಲ್ಲ ಇಲಾಖೆಗಳಂತೆ ಬ್ಯಾಂಕಿಂಗ್ ಸಹಾ ಅವಕ್ಕೆ ಒಳಗಾಗುತ್ತಲಿದೆ. ಬ್ಯಾಂಕರುಗಳು ನೀಡುವ ಇಂಥ ಮಾನವೀಯ ಸೇವೆಯನ್ನು ನಮ್ಮ ಸಮಾಜ ಗುರ್ತಿಸಿದೆಯೇ ಎಂಬುದು ಮುಖ್ಯ ಪ್ರಶ್ನೆ.

## ಗೆರೆ ಎಲ್ಲಿ ?

'ಸೇವೆ' ಎಂಬುದೇ ಮಾನವೀಯತೆಯ ಆಧಾರ ಹೊಂದಿದ ಕ್ರಿಯೆ. ಇಲ್ಲಿ ಅವಶ್ಯವಿರುವುದು ಎಲ್ಲಿಯವರೆಗೆ ನಾವು ಗ್ರಾಹಕರ ಕೆಲಸ ಮಾಡಿ ಕೊಡಬಹುದು ಎಂಬ 'ಗೆರೆ' ಹುಡುಕುವುದಷ್ಟೆ. ಒಂದು ಮಿತಿ ದಾಟಿದ ಅನಂತರ ಅದು 'ಸೇವೆ' ಅನ್ನಿಸಿಕೊಳ್ಳದೆ 'ಉಪಕಾರ' ಎನ್ನಿಸಿಕೊಳ್ಳಬಹುದು. ಅಂಚೆ ಕಛೇರಿಯ ಗುಮಾಸ್ತ ತನ್ನ ಗ್ರಾಹಕನೊಬ್ಬನು ಭರ್ತಿಮಾಡಿ ತಂದ ಎಂ. ಓ. ನಮೂನೆ ಸ್ವೀಕರಿಸಿ, ಅದಕ್ಕೆ ಸೂಕ್ತ ರಸೀತಿಯನ್ನು ಕ್ಷಿಪ್ರವಾಗಿ ನೀಡಿದ ಕ್ರಿಯೆ ಸೇವೆ. ಅನಕ್ಷರಸ್ಥನೊಬ್ಬ ಎಂ. ಓ. ನಮೂನೆ ಭರ್ತಿ ಮಾಡಲಾಗದೆ ಅದನ್ನು ಅಂಚೆ ಗುಮಾಸ್ತನಿಂದ ನಿರೀಕ್ಷಿಸಿದಾಗ ಅಂಥ ಕೆಲಸ ಉಪಕಾರ'ದ ಕಕ್ಷೆಯಲ್ಲಿ ಸೇರುವುದೇ ವಿನಾ 'ಸೇವೆ'ಯ ಕಕ್ಷೆಯಲ್ಲಿ ಅಲ್ಲ. 'ಉಪಕಾರ' ಮಾಡಬಾರದು ಎಂಬುದು ಇಲ್ಲಿನ ಅರ್ಥವಲ್ಲ. ಗ್ರಾಹಕರನ್ನು ಸಕ್ರಿಯರನ್ನಾಗಿ ಮಾಡುವ ಕೆಲಸ. ವೇಳೆ ಶ್ರಮದ ಅರ್ಥಪೂರ್ಣ ಉಪಯೋಗಕ್ಕೆ ಬ್ಯಾಂಕರ್ ಗ್ರಾಹಕನಿಂದ ನಿರೀಕ್ಷಿಸಬಹುದಾದ ಸಹಕಾರ.

ಸರ್ಕಾರ ಕೂಡ ನಲವತ್ತು ವರ್ಷಗಳ ದೀರ್ಘ ಅವಧಿಯಲ್ಲಿ ನಿರಕ್ಷರತೆ ತೊಡೆದುಹಾಕಲು ಎಷ್ಟು ಪ್ರಯತ್ನಿಸಿದೆ ? ಜಪಾನು, ಜರ್ಮನಿಯಂಥ, ವಿಸ್ತಾರದಲ್ಲಿ ನಮ್ಮದಕ್ಕಿಂತ ಚಿಕ್ಕ, ದೇಶಗಳೂ ಇದೇ ಅವಧಿಯಲ್ಲಿ ವಿದ್ಯಾಭ್ಯಾಸದಲ್ಲಿ ಎಂಥ ಅಭೂತಪೂರ್ವ ಪ್ರಗತಿತೋರಿಸಿದುವೆಂದರೆ ಇಂದು ಪ್ರಪಂಚದಲ್ಲಿಅವು ಪಡೆದಿರುವ ಸ್ಥಾನವೇ ಅದಕ್ಕೆ ಸಾಕ್ಷಿ, ಅಲ್ಲಿನ ಅಕ್ಷರಸ್ಥರ ಪ್ರಮಾಣವೇ ಸಾಕ್ಷಿ. ಆ ದೇಶಗಳು ಸಾಧಿಸಿದ, ಸಾಧಿಸುತ್ತಿರುವ ವಿಜ್ಞಾನ, ತಂತ್ರಜ್ಞಾನಗಳ ಹೊಸ ಹೊಸ ಆವಿಷ್ಕಾರಗಳು ಪ್ರಗತಿಯ ಮೈಲಿಗಲ್ಲುಗಳು. ಆದರೆ ನಮ್ಮ ದೇಶದಲ್ಲಿ ಇಂಥ ಪ್ರಗತಿಯ ವೇಗ ಯಾಕೆ ಅಸಾಧ್ಯವಾಯಿತೆಂದರೆ ನಮ್ಮ ಯಾವುದೇ ಪ್ರಗತಿಪರ ಯೋಜನೆಗಳಲ್ಲಿ ಮೂಲಭೂತ ಪ್ರಾಮಾಣಿಕತೆ, ನಿಷ್ಠೆ ಇಲ್ಲದಿರುವುದು. ವಯಸ್ಕರ ಶಿಕ್ಷಣ ಇಲಾಖೆ ಇದಕ್ಕೊಂದು ಉದಾಹರಣೆ. ಈ ಇಲಾಖೆಯ ಕೆಲಸ ನಿರೀಕ್ಷಿತ ಮಟ್ಟ ಮುಟ್ಟಿದ್ದರೆ, ಇಂದು ಈ ಬರಹ ಸಂಪೂರ್ಣ ಅಪ್ರಸ್ತುತವಾಗುತ್ತಿತ್ತು.

ಗ್ರಾಹಕನೇ ತನ್ನ ಬರವಣಿಗೆಯ ಕಾರ್ಯ ವಹಿಸಿಕೊಂಡನೆಂದರೆ ಬ್ಯಾಂಕರನಿಗೆ ಅದರಿಂದುಂಟಾಗುವ ಲಾಭವೆಂದರೆ ಸಮಯ ಹಾಗೂ ಶ್ರಮವನ್ನು ಆತ ಅನೇಕ ಉಪಯುಕ್ತ ಅವಸರದ ಕೆಲಸಗಳಿಗೆ ವಿನಿಯೋಗಿಸಬಲ್ಲ ! ಈ ನಿಟ್ಟಿನಲ್ಲಿ ಗ್ರಾಹಕರೂ ಯೋಚಿಸಬೇಕು. ಇಂದಿಗೂ ಅನೇಕ ಗ್ರಾಹಕರಲ್ಲಿ 'ಎಲ್ಲ ಬರವಣಿಗೆಯೂ ಬ್ಯಾಂಕರನ ಕೆಲಸ' ಎಂಬ ಕಲ್ಪನೆ ಇದೆ. ಇದು ಖಂಡಿತ ತಪ್ಪು. ನಮ್ಮ ಗ್ರಾಹಕ ಬಂಧುಗಳಿಗೆ ಬರವಣಿಗೆ ಎಂದರೆ ಬೇಸರ, ತನ್ನ ಪ್ರತಿಷ್ಠೆಗೆ ಧಕ್ಕೆ ತರುವಂಥ ಕೆಲಸ.

## ಬ್ಯಾಂಕರನ ಕರ್ತವ್ಯ

ಬ್ಯಾಂಕರರು ಈ ನಿಟ್ಟಿನಲ್ಲಿ ಚಿಂತನೆ ಮಾಡಬೇಕು. ಬರಹ ಬಲ್ಲ ಗ್ರಾಹಕನಿಗೆ ಇಷ್ಟು ಅಲ್ಪ ಕೆಲಸವನ್ನು

ತಾನೇ ಮಾಡಿಕೊಳ್ಳುವಂಥ ಸ್ವಾವಲಂಬನೆ ಕಲಿಸುವ ಕೆಲಸ ಅಸೌಜನ್ಯವಲ್ಲ. ಗ್ರಾಹಕನ ಪಾಲಿನ ಕೆಲಸವನ್ನು ಅವನ ಗಮನಕ್ಕೆ ತರುವುದರಿಂದ ಬ್ಯಾಂಕರರಿಗೆ ಕರ್ತವ್ಯಲೋಪದ ದೋಷ ಹುಟ್ಟುವುದಿಲ್ಲ. ಇಲ್ಲಿ ತೆಗೆದುಕೊಳ್ಳಬೇಕಾದ ಎಚ್ಚರಿಕೆಯೆಂದರೆ, ಬರವಣಿಗೆಯ ಪ್ರೇರಣೆ ಸರಿಯಾದ ನಿಟ್ಟಿನಲ್ಲಿ ತಾಳ್ಮೆ ಸಹನೆಯಿಂದ ಸಾಗಬೇಕು. ಅಷ್ಟೇ, ಕಡ್ಡಾಯ ನಿಯಮಗಳಿಂದಲ್ಲ! ಆಗ ಮಾನವೀಯ ಸಂಬಂಧಗಳು ಕೂಡ ಕೆಡುವುದಿಲ್ಲ. ಇಲ್ಲಿ ತಾಳ್ಮೆ ಅವಶ್ಯ ಅಷ್ಟೆ.

ಬರೆಯಲು ಬಾರದ ಎಡಗೈ ಹೆಬ್ಬೆಟ್ಟಿನ ಗ್ರಾಹಕರಿಗೆ ಅಕ್ಷರ ಕಲಿಸುವಷ್ಟು ಸಮಯ, ತಾಳ್ಮೆ ಬ್ಯಾಂಕರರಿಗೆ ಇಲ್ಲದಿರಬಹುದು. ಅದು ಬ್ಯಾಂಕರನ ಕೆಲಸವೂ ಅಲ್ಲದಿರಬಹುದು. ಆದರೆ ಆತನ ಸಹಿಯನ್ನಾದರೂ ಮಾಡಲು ಬ್ಯಾಂಕರ್ ಹೇಳಿಕೊಡಬಹುದು. ಮುಂದೆ ಸಹಿ ಒಂದೇ ಮಾದರಿಯಲ್ಲಿ ಉಳಿಯುವಂತೆ ನೋಡಿಕೊಳ್ಳುವ ತಾಳ್ಮೆ ಸಹನೆಯನ್ನು ಸಹ ಬ್ಯಾಂಕರ್ ಹೊಂದಿರಬೇಕು.

ಹತ್ತಾರು ಗ್ರಾಹಕರ ನೋಡಿ ಅಕ್ಷರಗಳು, ಅಂಕಿಗಳು ದಿನವಹಿ ಬರೆಯುವ ಸಿಬ್ಬಂದಿಗೆ ತೊಡಕಾಗಿ ಅವರ ಕಾರ್ಯವೇಗ ಕುಂಠಿತವಾಗಬಹುದು ಎಂಬ ಶಂಕೆ ಇದೆ. ಇಂದು ಬ್ಯಾಂಕ್ ಸಿಬ್ಬಂದಿಯ ಕೈಬರಹವಾದರೂ ಎಷ್ಟು ಚೆನ್ನಾಗಿದೆ? ಸಮಾಜದಲ್ಲಿ ಬ್ಯಾಂಕ್ ಸಿಬ್ಬಂದಿಯ ಕೈಬರಹ ಇಂದು ಲೇವಡಿಯ ವಸ್ತು. ಸಿಬ್ಬಂದಿಯೊಬ್ಬ ತನ್ನ ಸಹ ನೌಕರರ ನೋಡಿ ಕೈಬರಹವನ್ನು ಸಹಿಸಿಕೊಳ್ಳುವುದಾದರೆ ಗ್ರಾಹಕನದನ್ನೇಕೆ ಸಹಿಸಿಕೊಳ್ಳಬಾರದು?

ಗ್ರಾಹಕ ತಾನೇ ಲೇಖನಿ ಹಿಡಿಯುವ ಆರಂಭದಲ್ಲಿ ಸಾಮಾನ್ಯವಾಗಿ ನಿರೀಕ್ಷಿಸಬಹುದಾದ ಒಂದು ದೋಷವೆಂದರೆ, ಅಂಕಿಗಳು ಸ್ಪಷ್ಟವಾಗಿ ಕಾಣದಿದ್ದಾಗ ಅದು ತಪ್ಪಾಗಿ ನಮೂದಾಗಿ ಲೆಕ್ಕದಲ್ಲಿ ತಪ್ಪಾಗುವ ಸಂಭವವಿರಬಹುದು. ಬ್ಯಾಂಕ್ ಸಿಬ್ಬಂದಿಗೆ ತುಸು ಪ್ರಜ್ಞಾಪೂರ್ವಕವಾದ ವಿಶೇಷ ಎಚ್ಚರಿಕೆ ಇದ್ದರೆ ಇಂಥ ತಪ್ಪುಗಳನ್ನು ನಿವಾರಿಸಿಕೊಳ್ಳಬಹುದು. ಕಾಲಕ್ರಮದಲ್ಲಿ ಗ್ರಾಹಕ ತಪ್ಪಿಲ್ಲದೆ ಬರೆಯುವುದನ್ನು ಕಲಿತು ಬರವಣಿಗೆಯ ವೇಗವನ್ನು ಸಾಧಿಸಿಕೊಳ್ಳಬಲ್ಲ.

## ಕಾನೂನಿನ ತೊಡಕೆಷ್ಟು?

ಬ್ಯಾಂಕ್ ಅಧಿಕಾರಿಗಳೊಂದಿಗೆ ಈ ವಿಷಯ ಚರ್ಚೆಗೆ ಬಂದಾಗ ಕಾನೂನಿನ ತೊಡಕು ಬರಬಹುದು ಎಂಬ ಅಭಿಪ್ರಾಯ ಮೂಡಿಬಂತು. ದಸ್ತಾವೇಜು, ಋಣ ತಿಳುವಳಿಕೆ ಪತ್ರಗಳಲ್ಲಿ ಕೈ ಬರಹದ ಒಂದೇ ನಮೂನೆ ಇರಬೇಕು. ಇಲ್ಲದಿದ್ದಲ್ಲಿ ನ್ಯಾಯಾಲಯದಲ್ಲಿ ಪ್ರತಿವಾದಿ ವಕೀಲರು ಇದರ ಲಾಭ ಪಡೆಯಬಹುದು ಎಂಬ ಅನುಮಾನ ಸಂಪೂರ್ಣವಾಗಿ ಸರಿಯಾದದ್ದು. ಆದ್ದರಿಂದ ಇವನ್ನು ಬ್ಯಾಂಕ್ ಸಿಬ್ಬಂದಿ ಬರೆಯುವುದೇ ಸೂಕ್ತ. ಚಲನ್ನು, ಚೆಕ್ಕು, ಅರ್ಜಿಗಳನ್ನು ಗ್ರಾಹಕ ಬರೆದದ್ದಾದರೂ ಅವುಗಳಲ್ಲಿ ಅಂಥ ಕಾನೂನಿನ ತೊಡಕು ಬರುವುದಿಲ್ಲ. ಕಾನೂನಿನ ತೊಡಕು ಏನು, ಎಲ್ಲಿ ಎಂಬ ಪ್ರಶ್ನೆಗೆ ಉತ್ತರ ಅಸ್ಪಷ್ಟವಾಗಿದೆ. ಇಂದು, ಬ್ಯಾಂಕರ್ ಸಕಲವನ್ನೂ ಬರೆದುಕೊಳ್ಳುತ್ತಿರುವ ಕಾಲದಲ್ಲಿ ಕಾನೂನಿನ ತೊಡಕು ಇಲ್ಲವೆ? ಅರೆಭರ್ತಿ ಮಾಡಿದ ದಾಸ್ತಾವೇಜುಗಳು, ಖಾಲಿ ಸಹಿ ಮಾತ್ರ ಹೊಂದಿದ ದಸ್ತಾವೇಜುಗಳು, ಋಣ ದೃಢೀಕರಣ ಪತ್ರಗಳು, ಹೆಬ್ಬೆಟ್ಟಿನ ಗುರುತಿಗೆ ದೃಢೀಕರಣ ಸಹಿ ಇಲ್ಲದ ದಾಸ್ತಾವೇಜುಗಳು ನ್ಯಾಯಾಲಯದ ಕಟ್ಟೆಗೆಷ್ಟು ಬಂದಿಲ್ಲ? ಅದು ಸಿಬ್ಬಂದಿಯ ದೃಷ್ಟಿಯಲ್ಲಿ ಕಾನೂನಿನ ತೊಡಕು ಅಲ್ಲವೆ? ಅದನ್ನು ಅವರು ಹೇಗೆ ನಿವಾರಿಸಿಕೊಳ್ಳುತ್ತಾರೆ? ಇಷ್ಟು ತೊಡಕು ನಿವಾರಿಸಿಕೊಳ್ಳುವ ಸಾಮರ್ಥ್ಯವಿರುವವರಿಗೆ ಗ್ರಾಹಕನ ಕೈ ಬರಹ ತೊಡಕಾಗಲಾರದು.

## ಬರೆಯಲಾರದ ಗ್ರಾಹಕನ ಸಮಸ್ಯೆ

ಬರೆಯಲಾರದ ಗ್ರಾಹಕನೇ ಇಂದು ನ್ಯಾಯಾಲಯದ ಕಟ್ಟೆಯಲ್ಲಿ ಸಮಸ್ಯೆ ಆಗಿದ್ದಾನೆ. ಆವನ ಎಡಗೈ ಹೆಬ್ಬೆಟ್ಟು ಅವನ ದೋಷವನ್ನು ಮುಚ್ಚಿಹಾಕುವ ದೊಡ್ಡ ಅಸ್ತ್ರ. ಕೆಲವೊಮ್ಮೆ ಅದು ಧೂರ್ತತೆಯ ಸಂಕೇತವೂ ಹೌದು. ಎಡಗೈ ಹೆಬ್ಬೆಟ್ಟಿನಿಂದ ಆತ ತನ್ನನ್ನು ರಕ್ಷಿಸಿಕೊಳ್ಳುವ ಅಸ್ತ್ರವನ್ನಾಗಿ ಉಪಯೋಗಿಸಿಕೊಳ್ಳುವ ಚಾಣಾಕ್ಷತನ, ಬಹುಶಃ ನಮ್ಮ ದೇಶದಲ್ಲಿ ಇರುವಷ್ಟು ಬೇರೆ ದೇಶದಲ್ಲಿ ಇರಲಾರದು! ಆತ ತನ್ನನ್ನು ರಕ್ಷಿಸಿಕೊಳ್ಳುವಲ್ಲಿ ನೀಡುವ ಮಾಮೂಲಿ ನೆವಗಳು ಇವು:

1 ಕರಾರು ಪತ್ರದಲ್ಲಿ ಬರೆದದ್ದನ್ನು ನನಗೆ ಯಾರೂ 'ನನಗೆ ಗೊತ್ತಿದ್ದ' ಭಾಷೆಯಲ್ಲಿ ಹೇಳಲಿಲ್ಲ.
2 ಎಲ್ಲೆಲ್ಲಿ ಹೆಬ್ಬೆಟ್ಟು ಒತ್ತು ಎಂದರೋ ಅಲ್ಲಲ್ಲಿ ಒತ್ತಿದ್ದೇನೆ.
3 ನನ್ನ ಇಚ್ಛೆ ಮೀರಿ ಬಲಪ್ರಯೋಗದಿಂದ ಹೆಬ್ಬೆಟ್ಟು ಒತ್ತಿಸಿಕೊಂಡಿದ್ದಾರೆ.
4 ಮೃತ ವ್ಯಕ್ತಿಯ ಹೆಬ್ಬೆಟ್ಟು ಗುರುತಿನಲ್ಲಿ ಸಾಮಾನ್ಯವಾಗಿ ಪಲಾಯನವಾದದ ಸಾಧ್ಯತೆಯೆಂದರೆ, ಮೃತ ವ್ಯಕ್ತಿ ಜೀವಂತ ಇದ್ದಾಗ ಹೆಬ್ಬೆಟ್ಟು ಸಹಿ ಪಡೆಯದೆ ಸತ್ತ ನಂತರ ಶವದ ಹೆಬ್ಬೆಟ್ಟು ಗುರುತು ಮೋಸದಿಂದ ಪಡೆದಿದ್ದಾರೆ (ಕಿತ್ತೂರಿನ ಇತಿಹಾಸದಲ್ಲಿ ಕೂಡಾ ದತ್ತಕ ಸಿಂಧುವಲ್ಲವೆಂದು ಸಾಧಿಸಲು ಥ್ಯಾಕರೆ ಸಾಹೇಬ, ಶಿವಲಿಂಗರುದ್ರಸರ್ಜಾ ಬಗ್ಗೆ ಇದೇ ನೆವ ಹೂಡಿದ್ದ ಎಂಬುದು ಇಲ್ಲಿ ಗಮನಾರ್ಹ.)

ಇವು ಕೆಲವು ಉದಾಹರಣೆಗಳು ಮಾತ್ರ. ನ್ಯಾಯಾಲಯದಲ್ಲಿ ಇಂದು ಬರಹಗಾರನಲ್ಲದ ಪ್ರಜೆ ಅನೇಕ ದೃಷ್ಟಿಯಿಂದ ತೊಡಕಾಗಿದ್ದಾನೆ. ಅನಕ್ಷರತೆ ಎಲ್ಲೆಲ್ಲೂ ತೊಡಕಾಗಿರುವಂತೆ ನ್ಯಾಯಾಲಯದಲ್ಲಿಯೂ ತೊಡಕಾಗಿದೆ. ಕಾನೂನಿನ ತೊಡಕು ಬರಬಹುದೆಂದು ಅನುಮಾನಪಡುವವರಿಗೆ ಈ ಎರಡು ಪ್ರಶ್ನೆ:

1 ಅಂಥ ಕಾನೂನು ತೊಡಕು ಏನು?
2 ಸಿಬ್ಬಂದಿ ಬರೆಯುತ್ತಿರುವ ಈ ದಿನಗಳಲ್ಲಿ ಕಾನೂನಿನ ತೊಡಕು ಇಲ್ಲವೆ?

## ಭಾಷೆಯ ತೊಡಕು

ಗ್ರಾಹಕನ ಬರವಣಿಗೆಯ ಪಾತ್ರದಲ್ಲಿ ಸದ್ಯ ಕಂಡು ಬರುವ ಮುಖ್ಯ ತೊಡಕು ಭಾಷೆಯದು. ಇಂದು ನಮ್ಮ ದೇಶದಲ್ಲಿ ನಮ್ಮ ಬ್ಯಾಂಕುಗಳು ಅಂತರರಾಷ್ಟ್ರೀಯ ಹಾಗೂ ಒಕ್ಕೂಟದ ಭಾಷೆಗೆ ನೀಡಿದಷ್ಟು ಮಹತ್ವ (ಇದು ಕೂಡಾ ಕಾಯಿದೆಯ ಹೇರಿಕೆಯೇ!) ಪ್ರಾದೇಶಿಕ ಭಾಷೆಗೆ ನೀಡಿಲ್ಲ. ಗ್ರಾಹಕ ಬಳಸುವ ಭಾಷೆ ಸಹಜವಾಗಿ ಪ್ರಾದೇಶಿಕವಾದುದು. ಗ್ರಾಹಕ ತನ್ನದಲ್ಲದ ಭಾಷೆಯಲ್ಲಿ ಹೇಗೆ ಬರೆಯಬಲ್ಲ? ಅಂಥ ಭಾಷೆಯಲ್ಲಿ ಬರೆ ಎಂದು ಪ್ರೇರಣೆ ನೀಡುವುದಾದರೂ, ಹೇಗೆ? ಈ ಸಮಸ್ಯೆ ಹಿಂದೂ ಇಂದೂ ಮುಂದೂ ಬಾಧಿಸುತ್ತಲೇ ಇರುವಂಥದು. ಎಲ್ಲಿಯವರೆಗೆ ಪ್ರಾದೇಶಿಕ ಭಾಷಾ ಅಳವಡಿಕೆಯನ್ನು ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲವೋ ಅಲ್ಲಿಯವರೆಗೂ ಗ್ರಾಹಕನ ಬರವಣಿಗೆ ಕನಸಿನ ಗಂಟು.

ಶಾಖಾ ವ್ಯವಸ್ಥಾಪಕನಾಗಿ ನಾನು ಗ್ರಾಹಕರ ಬರವಣಿಗೆಯ ಪತ್ರದ ಬಗ್ಗೆ ಹೊಸ ಎಚ್ಚರ, ಕಾಳಜಿಯನ್ನು ಗ್ರಾಹಕರಲ್ಲಿ ಸೌಜನ್ಯಪೂರ್ಣವಾಗಿ ಬಿಂಬಿಸಲು ತೊಡಗಿದೆ. ಈಗ ತಮ್ಮ ಬರವಣಿಗೆಯ ಕೆಲಸವನ್ನು ತಾವೇ ಮಾಡಿಕೊಳ್ಳುವ ಗ್ರಾಹಕರ ಸಂಖ್ಯೆ ಗಮನಾರ್ಹವಾಗಿ ಹೆಚ್ಚಿದೆ. ಈ ನಿಟ್ಟಿನಲ್ಲಿ ಶೇ. 40ರಷ್ಟು ಯಶಸ್ಸು ದೊರಕಿದೆ. ಉಳಿದ ಭಾಗದ ಗ್ರಾಹಕರು ಹೆಚ್ಚಿನವರು ನಿರಕ್ಷರರು, ಅರೆ ಅಕ್ಷರಸ್ಥರು, ಆದ್ದರಿಂದ ಶೇಕಡಾವಾರು ಸಂಖ್ಯೆ ಹೆಚ್ಚುತ್ತಿಲ್ಲ. ಅವರೂ ಮಾನವೀಯ ಸಂಬಂಧಗಳು ಏನೂ ಹದಗೆಟ್ಟಿಲ್ಲ.

ಈ ದಿಸೆಯಲ್ಲಿ ಬ್ಯಾಂಕು ಸಿಬ್ಬಂದಿ ಪ್ರಾಮಾಣಿಕ ಪ್ರಯತ್ನ ಮಾಡಿ ನೋಡಿ, ಆ ಹೊಸ ಬೆಳಕಿನಲ್ಲಿ ತೊಡಕುಗಳನ್ನು ಪರಿಶೀಲಿಸಲು ತೊಡಗಿದಾಗ ಮಾತ್ರ ನಿಜವಾದ ಕೆಲಸ ಆರಂಭವಾಗುತ್ತದೆ. ಅನುಭವದ ಬೆನ್ನೆಲುಬು ಇಲ್ಲದೆ ನಿರಾಧಾರವಾಗಿ ಸಂದೇಹಿಸುವಲ್ಲಿ ಅದು ನಿರಾಶಾವಾದ ಆಗಿಬಿಡುವ ಸಾಧ್ಯತೆ ಇದೆ. ಎಲ್ಲಕ್ಕಿಂತ ಹೆಚ್ಚಾಗಿ ಅಗತ್ಯವಿರುವುದು ಬ್ಯಾಂಕ್ ಸಿಬ್ಬಂದಿಯ ಮನಸ್ಸು.



# ಬ್ಯಾಂಕಿಂಗ್ ಉದ್ದಿಮೆಯಲ್ಲಿ ಗ್ರಾಹಕ ಸಂಬಂಧ

**'ಜನತೆ ನಿಮ್ಮ ಪರವಾಗಿದ್ದರೆ ನೀವು ನಿಮ್ಮ ಕಾರ್ಯದಲ್ಲಿ ಯಶಸ್ಸನ್ನು ಕಾಣುವಿರಿ. ಜನತೆ ನಿಮಗೆ ವಿರೋಧವಾಗಿದ್ದಲ್ಲಿ ನೀವು ನಿಮ್ಮ ಕಾರ್ಯದಲ್ಲಿ ವಿಫಲರಾಗುವುದು ಖಂಡಿತ' ಎಂಬ ಏಬ್ರಹಾಂ ಲಿಂಕನ್ನನ ಮಾತಿನ ಮಹತ್ತ್ವವನ್ನು ನಮ್ಮ ಬ್ಯಾಂಕುಗಳು ಇಂದು ಮನಗಾಣಬೇಕಾಗಿದೆ.**

ಧನಂಜಯ ಸೀ. ಭಂಡಿ
**ಭಾರತೀಯ ಸ್ಟೇಟ್ ಬ್ಯಾಂಕ್**
**ಬೆಂಗಳೂರು ನಗರ ಶಾಖೆ**

ಯಾವುದೇ ಒಂದು ಔದ್ಯೋಗಿಕ ಸಂಸ್ಥೆ ತನ್ನ ಉದ್ಯಮವನ್ನು ಉತ್ತಮವಾದ ದಾರಿಯಲ್ಲಿ ಮುನ್ನಡೆಸಿಕೊಂಡು ಹೋಗಿ ತನ್ನ ಗುರಿ ತಲುಪಲು, ಅಭಿವೃದ್ಧಿ ಹೊಂದಲು ಹಾಗೂ ಇದಕ್ಕಿಂತ ಮಿಗಿಲಾಗಿ ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಜೀವಿಸಿಕೊಂಡು ಹೋಗಲು ಗ್ರಾಹಕನ ಕೃಪಾಕಟಾಕ್ಷ ಅತ್ಯಂತ ಹಿರಿಯ ಪಾತ್ರ ವಹಿಸುತ್ತದೆ. ಇದು ಬ್ಯಾಂಕಿಂಗ್ ಉದ್ದಿಮೆಗೂ ಹೊರತಾಗಿಲ್ಲ. ಅಂತೆಯೇ ಯಾವುದೇ ಒಂದು ಬ್ಯಾಂಕು ತನ್ನ ಕಾರ್ಯದಲ್ಲಿ ಸಫಲವಾಗಿ, ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ತನ್ನ ಗ್ರಾಹಕನನ್ನೇ ಅವಲಂಬಿಸಿದೆ.

ಬ್ಯಾಂಕು ಯಾವುದೇ ತರದ ಭೌತಿಕವಸ್ತುವನ್ನು ಉತ್ಪಾದಿಸುವ ಸಂಸ್ಥೆಯಲ್ಲ. ಇದು ಮುಖ್ಯವಾಗಿ ಠೇವಣಿದಾರರಿಂದ ಠೇವಣಿ ಸಂಗ್ರಹಿಸಿ ಆವಶ್ಯಕತೆ ಇರುವ ಜನರಿಗೆ ಹೆಚ್ಚಿನ ಬಡ್ಡಿದರದಲ್ಲಿ ಹಣ ಸಹಾಯ ನೀಡುತ್ತದೆ. ಅಂದಮೇಲೆ ಇದು ಹಣ ಸೇವೆಯನ್ನು ಮಾರಾಟಮಾಡುವ ಒಂದು ಸಂಸ್ಥೆಯೆನ್ನಬಹುದು. ಹಾಗಾಗಿ ಇದು ಜನರನ್ನು ತನ್ನೆಡೆಗೆ ಸೆಳೆಯಲು ಉತ್ತಮ ಸಂಬಂಧವನ್ನು ಜನತೆಯಲ್ಲಿ ಹೊಂದಿರಬೇಕಾಗುತ್ತದೆ. ಉತ್ತಮ ಸಂಬಂಧಕ್ಕಾಗಿ ಉತ್ತಮ ಸೇವೆ ಅನಿವಾರ್ಯ.

ಉತ್ತಮ ಮಟ್ಟದ ಸೇವೆಯಿಂದ ಬ್ಯಾಂಕರ್ ಹಾಗೂ ಗ್ರಾಹಕರ ನಡುವಣ ಸಂಬಂಧ ಹೆಚ್ಚುವ ಸಂಭವ ಇದೆ. ಗ್ರಾಹಕನ ಸಂಬಂಧವೆಂದರೆ ಆತನು ಬ್ಯಾಂಕಿನ ಬಗ್ಗೆ ಉತ್ತಮವಾದ ಭಾವನೆ, ನಂಬಿಕೆ, ಆತ್ಮೀಯತೆಯನ್ನು ಹೊಂದಿರುವುದು; ಹಾಗೂ ಬ್ಯಾಂಕಿನಲ್ಲಿ ತಾನು ವ್ಯವಹರಿಸುವವರ ಜೊತೆ ಉತ್ತಮವಾದ ಸ್ನೇಹಯುತವಾದ ರೀತಿಯಲ್ಲಿ ವರ್ತಿಸುವುದು: ಹಾಗೂ ಆತನಿಗೆ ಬ್ಯಾಂಕಿನ ಬಗ್ಗೆ ಗೌರವವಿರುವುದು.

**ಆವಶ್ಯಕತೆ**

ಈ ಮೊದಲೇ ತಿಳಿಸಿದಂತೆ ಬ್ಯಾಂಕುಗಳು ಸೇವೆಯನ್ನು ಮಾರಾಟ ಮಾಡುವಂಥವುಗಳು. ಭೌತಿಕ ವಸ್ತುಗಳನ್ನು ಉತ್ಪಾದಿಸುವ ಯಾ ಮಾರಾಟ ಮಾಡುವ ಸಂಸ್ಥೆಗಳಾದರೋ, ತಮ್ಮ ಮಾರುಕಟ್ಟೆಯನ್ನು ತಮ್ಮ ಉತ್ಪಾದನೆಯ ಗುಣಮಟ್ಟವನ್ನು ವೃದ್ಧಿಪಡಿಸುವುದರ ಮೂಲಕವೇ ಭದ್ರಪಡಿಸಿಕೊಳ್ಳಬಹುದು. ಆದರೆ ಬ್ಯಾಂಕುಗಳು ತಮ್ಮ ಸೇವೆಯನ್ನು ಜನರು ಸ್ವೀಕರಿಸುವಂತಹ ವಾತಾವರಣವನ್ನು ಕಲ್ಪಿಸಿಯೇ ತಮ್ಮ ಉದ್ದಿಮೆಯನ್ನು ನಡೆಸಬೇಕಾಗಿದೆ. ಏಬ್ರಹಾಂ ಲಿಂಕನ್ ಹೇಳಿದಂತೆ, "ಜನತೆ ನಿಮ್ಮ ಪರವಾಗಿದ್ದರೆ ನೀವು ನಿಮ್ಮ ಕಾರ್ಯದಲ್ಲಿ ಯಶಸ್ಸನ್ನು ಕಾಣುವಿರಿ. ಜನತೆ ನಿಮಗೆ ವಿರೋಧವಾಗಿದ್ದಲ್ಲಿ ನೀವು ನಿಮ್ಮ ಕಾರ್ಯದಲ್ಲಿ ವಿಫಲರಾಗುವುದು ಖಂಡಿತ." ಆದುದರಿಂದ ಬ್ಯಾಂಕು ಕೂಡ ಜನರನ್ನು ತನ್ನ ಪರವಾಗಿರುವಂತಹ ಹಾಗೂ ಬ್ಯಾಂಕಿಂಗ್ ಹವ್ಯಾಸವನ್ನು ಮೂಡಿಸುವಂತಹ ಕಾರ್ಯದಲ್ಲಿ ತೊಡಗಿಸಬೇಕು. ಇದುವೇ ಬ್ಯಾಂಕಿನ ವ್ಯವಹಾರದಲ್ಲಿ ಗಣನೀಯವಾದ ಬೆಳವಣಿಗೆಗೆ ಕಾರಣವಾಗಿ, ಬ್ಯಾಂಕಿಗೆ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನ, ಸುನಾಮ, ತತ್ಫಲವಾಗಿ ಅಧಿಕ ಲಾಭ, ಗಳಿಸಿಕೊಡಬಲ್ಲದು.

ಇಂದು ಸಾರ್ವಜನಿಕ ಸಂಬಂಧ ಏರ್ಪಡಿಸಬೇಕಾದ ಆವಶ್ಯಕತೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಹಿಂದೆ ಬ್ಯಾಂಕುಗಳು ಸಣ್ಣ ಪ್ರಮಾಣದಲ್ಲಿ ಮಾತ್ರ, ವಿಶೇಷವಾಗಿ ಏಕಮಾಲೀಕತ್ವದ ಒಡೆತನದಲ್ಲಿ, ಆರಂಭಗೊಂಡಾಗ, ಬ್ಯಾಂಕರ್ ಹಾಗೂ ಗ್ರಾಹಕರ ನಡುವೆ ನೇರ ಸಂಬಂಧವಿತ್ತು; ಹಾಗೂ ಬ್ಯಾಂಕರನ ಸಾಮಾಜಿಕ ಜವಾಬ್ದಾರಿಯೂ ಅಂದು ನಗಣ್ಯವಾಗಿತ್ತು. ಆದುದರಿಂದ ಬ್ಯಾಂಕರ್ ಹಾಗೂ ಗ್ರಾಹಕರ ಸಂಬಂಧದ ಬಗ್ಗೆ ಅಂದು ವಿಚಾರಿಸಬೇಕಾದ ಆವಶ್ಯಕತೆಗಳು ಅಷ್ಟೊಂದು ಇರಲಿಲ್ಲ. ಆದರೆ ಇಂದು ಬೃಹತ್ಪ್ರಮಾಣದಲ್ಲಿ ದೇಶಾದ್ಯಂತ ಅನೇಕ ಶಾಖೆಗಳ ಜಾಲವನ್ನು ಹೊಂದಿರು

---

## ಬ್ಯಾಂಕುಗಳಲ್ಲಿ ಲೆಕ್ಕ ಪರಿಶೋಧನೆ

[8ನೆಯ ಪುಟದಿಂದ ಮುಂದುವರಿದುದು]

3 ನಿರೀಕ್ಷಣಾಧಿಕಾರಿಗಳನ್ನು ಪ್ರತ್ಯೇಕವಾಗಿಯೇ ನೇಮಕ ಮಾಡಬೇಕು.

5 ಪ್ರತಿ ವರ್ಷದ ಆರಂಭದ ಆರು ತಿಂಗಳಲ್ಲಿ ಲೆಕ್ಕ ಪರಿಶೀಲನೆ ಮುಗಿದು ಮುಂದಿನ ಆರು ತಿಂಗಳಲ್ಲಿ ವರದಿಯ ಪ್ರಕಾರ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು.

6 ವರದಿಯನ್ನು ತೆಗೆದುಕೊಳ್ಳಬೇಕಾದ ಕ್ರಮಗಳ ವಿವರಗಳನ್ನೂ ಪ್ರತಿಯೊಂದು ಬ್ಯಾಂಕಿನ ಮುಖ್ಯ ಕಚೇರಿಗಳಿಗೆ ಸಲ್ಲಿಸಬೇಕು.

7 ಒಂದೇ ರೀತಿಯ ಲೆಕ್ಕ ಪರಿಶೋಧನ ಕ್ರಮವನ್ನು ಎಲ್ಲ ಬ್ಯಾಂಕುಗಳಿಗೂ ಅನ್ವಯಿಸುವಂತೆ ರೂಪಿಸಬೇಕು. ಇದರ ಬಗ್ಗೆ ಬ್ಯಾಂಕುಗಳಿಗೆ, ಬ್ಯಾಂಕಿನ ಶಾಖೆಗಳಿಗೆ ಯುಕ್ತ ವಿವರಗಳನ್ನು ಕಾಲಾನುಕ್ರಮದಲ್ಲಿ ನೀಡುತ್ತಿರಬೇಕು.

9 ನೂರಾರು ಪುಟಗಳ ವರದಿಗಳನ್ನು ಮೊಟಕುಗೊಳಿಸಿ ಆದಷ್ಟೂ ಸಂಕ್ಷಿಪ್ತಗೊಳಿಸಬೇಕು.

10 ಲೆಕ್ಕ ಪರಿಶೋಧನ ವರದಿಯ ಮೇಲೆ ಆ ಶಾಖೆಗಳಿಗೆ ದರ್ಜೆಗಳನ್ನು ನೀಡಿ, ಉತ್ತಮ ದರ್ಜೆಯನ್ನು ಪಡೆದ ಶಾಖೆಯ ಅಧಿಕಾರಿಗಳಿಗೆ ಹಾಗು ಸಿಬ್ಬಂದಿ ನೌಕರರಿಗೆ ಬಡ್ತಿ ಮುಂತಾದವುದರಲ್ಲಿ ಉತ್ತೇಜನ ನೀಡಬೇಕು.

2000ದನೆಯ ಇಸವಿಯ ವೇಳೆಗೆ ಸುಮಾರು 75,000ಕ್ಕೂ ಹೆಚ್ಚು ಶಾಖೆಗಳ ವ್ಯಾಪ್ತಿಯನ್ನು ಹೊಂದುವ ಬ್ಯಾಂಕಿಂಗ್ ಕ್ಷೇತ್ರದ ಬೆಳವಣಿಗೆಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಲಿರುವ ಲೆಕ್ಕ ಪರಿಶೋಧನೆ ಹಾಗು ನಿರೀಕ್ಷಣ ವ್ಯವಸ್ಥೆಯ ಬಗ್ಗೆ ಭಾರತ ಸರ್ಕಾರ, ರಿಸರ್ವ್ ಬ್ಯಾಂಕ್ ಮತ್ತು ಎಲ್ಲ ಬ್ಯಾಂಕುಗಳ ವ್ಯವಸ್ಥಾಪಕ ಮಂಡಳಿ ಈ ದಿಸೆಯಲ್ಲಿ ಯುಕ್ತವಾದ ಕ್ರಮಗಳನ್ನು ಕೈಗೊಂಡು, ಸುವ್ಯವಸ್ಥಿತವಾಗಿರುವಂತೆ ಮಾಡುವುದು ಒಂದು ಜವಾಬ್ದಾರಿಯ ಕೆಲಸವೇ ಆಗಿದೆ.



ವಂತಹ, ಹೆಚ್ಚಾಗಿ ಕೂಡುಬಂಡವಾಳ ಸಂಸ್ಥೆ ಯಾ ಸರಕಾರಿ ವಲಯವಾಗಿ ರೂಪುಗೊಂಡಾಗ ಬ್ಯಾಂಕು ಸಾಮಾನ್ಯವಾಗಿ ತನ್ನೆಲ್ಲ ಸೇವೆಯನ್ನೂ ಗ್ರಾಹಕನಿಗೆ ತನ್ನ ಸಿಬ್ಬಂದಿಯ ಮೂಲಕವೇ ನೀಡಬೇಕಾಗಿದೆ. ಏತನ್ಮಧ್ಯೆ, ತಲೆದೋರಬಹುದಾದ ನೇರ ಸಂಪರ್ಕದ ಕೊರತೆಯನ್ನು ನಿವಾರಿಸಿ ಸಮಧುರ ಬಾಂಧವ್ಯವನ್ನು ಆತ ಬ್ಯಾಂಕಿನ ಜೊತೆ ಹೊಂದಿರಲೇಬೇಕಾಗಿದೆ. ಹಾಗೂ ಭಾರತದಂತಹ ದೇಶದಲ್ಲಿ ಸೇವಾಶುಲ್ಕ, ಬಡ್ಡಿದರ ಇತ್ಯಾದಿಗಳು ಕೇಂದ್ರ ಬ್ಯಾಂಕಿನಿಂದ ನಿರ್ಧರಿಸಲ್ಪಡುವಾಗ, ಬ್ಯಾಂಕುಗಳು ಇನ್ನೊಂದು ಬ್ಯಾಂಕಿನ ಜೊತೆ ಸ್ಪರ್ಧೆಗೆ ಇಳಿಯಲು ಉತ್ತಮ ಗುಣಮಟ್ಟದ ಸೇವಾ ಸೌಲಭ್ಯವೊಂದೇ ಅಸ್ತ್ರವಾಗಿದೆ: ಅದರ ಮೂಲಕ ತನ್ನ ಸಂಬಂಧವನ್ನು ಉತ್ತಮಪಡಿಸಿಕೊಳ್ಳಬೇಕಾಗಿದೆ. ಬ್ಯಾಂಕಿನ ಹಾಗೂ ಗ್ರಾಹಕರ ನಡುವಿನ ಸುವರ್ಣ ಸೇತುವೆಯಾಗುವ ಕಾರ್ಯವು ಸಿಬ್ಬಂದಿಗಳದಾಗಿದೆ.

## ಸಂಬಂಧ ಯಾರ ಜೊತೆ ?

ಇಂದು ಗ್ರಾಹಕ ಹಾಗೂ ಬಳಕೆದಾರ ಜನತೆಯೊಡನೆ ಉತ್ತಮ ಬಾಂಧವ್ಯವನ್ನು ಬ್ಯಾಂಕಿನ ಅಧ್ಯಕ್ಷರಾದಿಯಿಂದಾಗಿ ಮುಂಗಟ್ಟೆಯ ನಗದುಗಾರ ಹಾಗೂ ಗುಮಾಸ್ತ, ಕ್ಷೇತ್ರಾಧಿಕಾರಿಗಳ ಸಹಿತವಾಗಿ, ಕಾವಲುಗಾರ ಹಾಗೂ ಖಾತಾಪಾಲಕರೂ ಹೊಂದಿರಲೇಬೇಕಾಗಿದೆ. ಆತ ಸಾಮಾನ್ಯವಾಗಿ ನೇರವಾಗಿ ಮುಂಗಟ್ಟೆಯಲ್ಲಿ ವ್ಯವಹರಿಸುವನಾದರೂ ಉಳಿದೆಲ್ಲ ಜನರೂ ಅವನ ಸೇವೆಗೆ ಪರೋಕ್ಷವಾಗಿ ಕಾರಣಕರ್ತರಾಗುತ್ತಾರೆ. ಆದುದರಿಂದ ಯಾವುದೇ ನಿರ್ದಿಷ್ಟಪಡಿಸಿದ ಸಿಬ್ಬಂದಿಗೆ ಮಾತ್ರ ಅನ್ವಯಿಸದೆ, ಇದು ಸಂಪೂರ್ಣ ಬ್ಯಾಂಕಿನ ಕುಟುಂಬಕ್ಕೆ ಸಂಬಂಧಿಸಿದ ವಿಷಯವಾಗಿದೆ.

ಗ್ರಾಹಕ ಬ್ಯಾಂಕಿಗೆ ಪ್ರತಿಸಲ ಬಂದಾಗಲೂ ನಗುಮುಖದ ಸ್ವಾಗತ, ಶೀಘ್ರ ಕೆಲಸ, ಬ್ಯಾಂಕು ತನ್ನನ್ನು, ತನ್ನತನವನ್ನು ಗುರುತಿಸಿದೆ ಎಂಬುದನ್ನೂ ತನ್ನ ಬಗ್ಗೆ ಇತರರು ಗೌರವ ತೋರಬೇಕೆಂಬುದನ್ನೂ ಬ್ಯಾಂಕಿನಲ್ಲಿ ಸುಲಭ ಹಾಗೂ ಗೊಂದಲರಹಿತ ಸೇವೆಯನ್ನು ಬಯಸಿದರೆ, ನೌಕರ ಗ್ರಾಹಕರ ಸೌಜನ್ಯ, ಸಹನೆ, ತಾಳ್ಮೆ, ಆತ್ಮೀಯ ಮನೋಭಾವ, ನಿರ್ದಿಷ್ಟ ಸಮಯದೊಳಗಾಗಿಯೇ ಸೇವೆ, ಹಾಗೂ ಗೌರವವನ್ನು ಪ್ರತಿಯಾಗಿ ಗ್ರಾಹಕನಿಂದ ನಿರೀಕ್ಷಿಸುತ್ತಾನೆ. ಅದಕ್ಕಾಗಿ ಇಬ್ಬರಲ್ಲೂ ಶಾಂತ ಹಾಗೂ ಪೂರ್ವಾಗ್ರಹಪೀಡಿತವಲ್ಲದ ಮನೋಭಾವದ ಅಗತ್ಯವಿದೆ. ಮುಂಗಟ್ಟೆಯಲ್ಲಿ ನಿಂತು ಕೆಲಸಮಾಡುವ ಸಿಬ್ಬಂದಿಗೂ ಬ್ಯಾಂಕಿನಲ್ಲಿ ಉತ್ತಮ ವಾತಾವರಣವಿದ್ದರೆ ತನ್ನ ಮನಸ್ಸಿನ ಮೇಲಣ ಹತೋಟಿ ತಪ್ಪುವ ಸಂಭವ ಕಡಿಮೆ. ಕೆಲಸದ ಸಮಭಾರ, ಒತ್ತಡದ ಮಿತಿ, ಯೋಗ್ಯ ಸಮಯದ ಕೆಲಸ, ಕೆಲಸದ ಬಗ್ಗೆ ಇತರ ಹಿರಿಯರಿಂದ ಕಿರಿಯರಿಗೆ ಮಾರ್ಗದರ್ಶನ ಅವಶ್ಯ. ಹಿರಿಯ ಅಧಿಕಾರಿಗಳಾದರೋ ತಮ್ಮ ಕೈಕೆಳಗಿನ ನೌಕರರು ಮಾಡಬಹುದಾದ ಸಣ್ಣಪುಟ್ಟ, ಸಾಮಾನ್ಯ, ಸಂಭವನೀಯ, ಉದ್ದೇಶರಹಿತ ತಪ್ಪುಗಳಿಗಾಗಿ ಅತಿಯಾಗಿ ರೇಗಾಡಿದಲ್ಲಿ ಆತನಲ್ಲಿರಬಹುದಾದ ಕಾರ್ಯೋತ್ಸಾಹ, ಕಾರ್ಯೋದ್ದೇಶಗಳು ಕುಂಠಿತಗೊಳ್ಳುವ ಸಂಭವವೂ ಕದಡಿದ ಮನದವನಾಗಿ ಗ್ರಾಹಕರ ಸೇವೆಯಲ್ಲಿ ಅಶ್ರದ್ಧೆಯನ್ನು ತೋರಿ, ಪ್ರತಿಯೊಂದಕ್ಕೂ ತನಗೆ ಅನುಕೂಲವಾಗುವಂತೆಯೇ ಬ್ಯಾಂಕ್ ಕಾಯಿದೆಯ ಸಹಾಯದಿಂದ ತನ್ನ ಕಾರ್ಯದ ಸಮರ್ಥನೆಯನ್ನು ಗ್ರಾಹಕರೆದುರು ಅರುಹಿ, ತಾನು ಕರ್ತವ್ಯಚ್ಯುತನಲ್ಲವೆಂದು ವಾದಿಸುತ್ತಾ, ಗ್ರಾಹಕನಿಗೆ ಸಮಾಧಾನವಾಗದ ರೀತಿಯಲ್ಲಿ ಕಾರ್ಯನಿರ್ವಹಿಸುವ ಸಂಭವವೂ ಇದೆ. ತಾನು ದುಡಿಯಬೇಕಾದುದು ಸಂಬಳ ಪಡೆಯಲಿಕ್ಕಾಗಿ ಎಂಬ ಮನೋಭಾವ ಆತನಲ್ಲಿ ಮೂಡಬಹುದು. ಉದಾ : ಅಂಕಿ 5 8 ಆಗಿಯೂ 4 9 ಆಗಿಯೂ ತನ್ನ ಗ್ರಹಿಕೆಗೆ ಎಡೆಯುಂಟಾಗಿ, ಇಪ್ಪತ್ತು ಮೂವತ್ತು ಪೈಸೆಗಳ ವ್ಯತ್ಯಾಸವೇ ಉಂಟಾಗಿ ಅನೇಕ ವೇಳೆ ಅನೇಕ ಶಾಖೆಗಳಲ್ಲಿ ಲೆಕ್ಕವ್ಯವಸ್ಥಾಪಕರು ನಗದು ಗುಮಾಸ್ತನ ಮೇಲೋ ಇತರರ ಮೇಲೋ ಅಸಹನೀಯ ರೀತಿಯಲ್ಲಿ ತಾಳ್ಮೆಗೆಟ್ಟು ವರ್ತಿಸಿದಲ್ಲಿ, ಆ ವ್ಯಕ್ತಿ ಮೇಲೆ ಹೇಳಿದ ರೀತಿಯ ಮನೋಭಾವ ತಾಳುವುದರಲ್ಲಿ ಸಂಶಯವಿಲ್ಲ. ಒಡೆಯನ ಮೇಲಿನ ಸಿಟ್ಟನ್ನು ಆಳಿನ ಮೇಲೆ ತೀರಿಸಬಾರದಾದರೂ ಇದೊಂದು ಬುದ್ಧಿವಾದ ಮಾತ್ರವಾಗಿದೆ. ಒಟ್ಟಿನಲ್ಲಿ ಅಂತಹ ಸನ್ನಿವೇಶಗಳು ಬ್ಯಾಂಕಿನ ಉತ್ತಮ ವಾತಾವರಣ ಕೆಡಿಸುವಂಥವುಗಳು. ಅಲ್ಲದೆ ಇತರ ಸಹೋದ್ಯೋಗಿಗಳ ಸಣ್ಣತನ, ಅಸಡ್ಡೆತನ, ಕಿರಿಯ ಸಿಬ್ಬಂದಿ ತಮ್ಮ ಹಿಡಿತದಲ್ಲಿರಬೇಕೆಂಬ ಓಬಿರಾಯನ ಕಾಲದ ಪರಿಸ್ಥಿತಿಯನ್ನು ಹಿರಿಯ ಸಿಬ್ಬಂದಿಯು ಪುನಃಪ್ರತಿಷ್ಠಾಪಿಸಲು ಹಾತೊರೆಯುವುದು, ಇವೂ ವಾತಾವರಣವನ್ನು ಕೆಡಿಸಬಹುದು.

ಬ್ಯಾಂಕು ತನ್ನ ಸಿಬ್ಬಂದಿಗೆ ಈ ದಿಸೆಯಲ್ಲಿ ಯೋಗ್ಯರೀತಿಯಲ್ಲಿ ತರಬೇತು ನೀಡಬೇಕಾದುದು. ಆತನಲ್ಲಿ ಸಮರ್ಪಣಾಮನೋಭಾವ ಮೂಡಿಸಬೇಕಾದುದು ಇದರ ಹಿಂದಿರಬೇಕಾದ ಅವಶ್ಯಕತೆ. ಆದರೆ ದುರ್ದೈವವಶಾತ್ ಇಂದು ಭಾರತದಲ್ಲಿ ಬ್ಯಾಂಕ್ ಸಿಬ್ಬಂದಿಗೆ ದೊರಕುತ್ತಿರುವ ತರಬೇತಿ ಇಂದಿನ ನಮ್ಮ ಶಿಕ್ಷಣಕ್ರಮದಷ್ಟೇ ಫಲಪ್ರದವಾಗಿದೆ. ಜಪಾನಿನಂತಹ ದೇಶದಲ್ಲಿ ಸಿಬ್ಬಂದಿಯು ತಾನು ಬ್ಯಾಂಕಿನವನೆಂದೂ, ಗ್ರಾಹಕರ ಜೊತೆ ವ್ಯವಹರಿಸುವಾಗ 'ತಾನು ಬ್ಯಾಂಕಿನ ಪರವಾಗಿ ಆತನಿಗೆ ಸೇವೆ ಸಲ್ಲಿಸುತ್ತಿರುವೆನೆಂದೂ ಮನೋಭಾವ ಉಂಟಾಗುವಂತೆ ಮಾಡಲು ಅಲ್ಲಿನ ಸಿಬ್ಬಂದಿ ತರಬೇತಿ ಹಾಗೂ ಮಾನವ ಸಂಪನ್ಮೂಲ ಅಭಿವೃದ್ಧಿ ಯೋಜನೆಗಳು ಸಫಲವಾಗಿದೆ.

ಭಾರತದಲ್ಲಿ ಅನೇಕ ಸಿಬ್ಬಂದಿ ತರಬೇತಿ ಕೇಂದ್ರದ ಮಾರ್ಗದರ್ಶಕರೇ ತಾವು ಕೇವಲ ನೌಕರರೆಂದು ತಿಳಿದು ಕಾರ್ಯ ನಿರ್ವಹಿಸುತ್ತಿರುವಾಗ ಅವರಿಂದ ಎಂತಹ ಸಾಧನೆ ಬಯಸಲು ಸಾಧ್ಯ ? ಆ ಕಾರಣದಿಂದಾಗಿಯೇ ಸಿಬ್ಬಂದಿಗಳಲ್ಲಿ ಸಮರ್ಪಣಾ ಮನೋಭಾವದ ಅಭಾವ ಕಂಡುಬರುವುದು.

## ನಾವಿಂದು ಮಾಡಬೇಕಾದ್ದು

ಸಾಮಾನ್ಯವಾಗಿ ನಾವಿಂದು ಮೊದಲು ನಮ್ಮ (ಬ್ಯಾಂಕಿನ)ಅಸ್ತಿತ್ವದ, ದೊರಕಬಹುದಾದ ಸೇವೆಯ ಅರಿವನ್ನು ಜನರಲ್ಲಿ ಮೂಡಿಸಬೇಕು. ಹಾಗೂ ಜನತೆಯು ನಮ್ಮ ಸೇವೆಯನ್ನು ಪಡೆಯುವ ಹಂಬಲ ಮೂಡುವಂತೆಯೂ ಮಾಡಬೇಕು. ಬ್ಯಾಂಕಿನ ಹಾಗೂ ಗ್ರಾಹಕರ ಪಾರಸ್ಪರಿಕ ಲಾಭದ ಅರಿವು ಮೂಡಿಸಬೇಕು. ಬ್ಯಾಂಕಿನ ಬಗ್ಗೆ ಜನರಲ್ಲಿ ನಂಬಿಕೆ, ಸೇವೆಯ ತೃಪ್ತಿ, ವೈಯಕ್ತಿಕ ಸ್ನೇಹ ಉಂಟುಮಾಡಬೇಕು. ಉಂಟಾಗಬಹುದಾದ ತಪ್ಪು ಕಲ್ಪನೆ ಬಗ್ಗೆ ಎಚ್ಚರ ಅವಶ್ಯಕ. ತನ್ನನ್ನು ನಿರ್ಲಕ್ಷಿಸುತ್ತಾರೆಂಬ ಮನೋಭಾವ ಗ್ರಾಹಕರಲ್ಲಿ ಮೂಡದಂತಿರಬೇಕು. ಗ್ರಾಹಕ ಬ್ಯಾಂಕಿಗೆ ನೀಡಿದ ಸಲಹೆ ಅಥವಾ ದೂರಿನ ಬಗ್ಗೆ ಬ್ಯಾಂಕು ಗಮನಿಸಿದೆ ಎಂದೂ, ಅದನ್ನು ಯೋಗ್ಯವಾಗಿ ಪರಿಶೀಲನೆಗೊಳಪಡಿಸಿದೆ ಎಂದೂ ಕಲ್ಪನೆ ಆತನಲ್ಲಿ ಮೂಡುವಂತೆ ನೋಡಿಕೊಳ್ಳಬೇಕು. ಹಾಗೂ ಬ್ಯಾಂಕು ಸಾಕಷ್ಟು ಸಿಬ್ಬಂದಿ ವರ್ಗವನ್ನು ಶಾಖೆಗೆ ಒದಗಿಸಬೇಕು.

## ನಾವೀಗ ತೆಗೆದುಕೊಳ್ಳಬೇಕಾದ ಕ್ರಮಗಳು

1 ಸಿಬ್ಬಂದಿ ಪ್ರಾಥಮಿಕ ಹಂತದಿಂದಲೂ ಉತ್ತಮ ಸೇವೆ ಸಲ್ಲಿಸುವ ಬಗ್ಗೆ ಕಾಳಜಿ.

2 ಗ್ರಾಹಕನಿಗೆ ಬ್ಯಾಂಕಿನ ಬಗ್ಗೆ ಪ್ರತಿಷ್ಠೆ ಬೆಳೆಸುವುದು. ಆತನ ಪ್ರತಿಷ್ಠೆಯನ್ನು ಬ್ಯಾಂಕು ಗುರುತಿಸುವುದು.

3 ಗ್ರಾಹಕರ ಸೇವೆಯ ಆವಶ್ಯಕತೆ, ಸ್ವರೂಪ ಅರಿಯುವುದು.

4 ಸದ್ಯದ ಸೇವಾಪದ್ಧತಿ ಮೆಚ್ಚುಗೆಯಾಗಿದೆಯೆ ಎಂಬ ಬಗ್ಗೆ ಪರಿಶೀಲನೆ. ಬದಲಾವಣೆಯ ಆವಶ್ಯಕತೆ ಅರಿಯುವುದು.

5 ಹೊಸ ಸೇವಾ ಸೌಲಭ್ಯದ ಬಗ್ಗೆ ಮಾಹಿತಿ ಕೊಡುವುದು. ಇದು ಅವರಿಗೆ ಅವಶ್ಯವೆ, ಉಪಯುಕ್ತವೆ ಎಂಬುದನ್ನು ಪರಿಗಣಿಸಬೇಕು. ಉದಾ : ಸದ್ಯದ ಪರಿಸ್ಥಿತಿಯಲ್ಲಿ ಹಳ್ಳಿಯ ಬಡ ರೈತನಿಗೆ ಉದರಿ ಕಾರ್ಡು ಅನಾವಶ್ಯಕ.

6 ಬ್ಯಾಂಕು ಗ್ರಾಹಕರ ಸಂಬಂಧದ ಬಗ್ಗೆ ಕೈಗೊಂಡ ಕಾರ್ಯಕ್ರಮಗಳು ಫಲಪ್ರದವಾಗಿವೆಯೇ ಎಂಬ ಬಗ್ಗೆ ಆಗಾಗ ಪರಿಶೀಲನೆ.

### ಕಾರ್ಯಕ್ರಮಗಳ ಸ್ವರೂಪ

ಸದ್ಯದ ಗ್ರಾಹಕರ ಜೊತೆ ಸಂಬಂಧ ಎರಡು ರೀತಿಯದು: 1 ನೇರ ಸಬಂಧ. 2 ಪರೋಕ್ಷ ಸಂಬಂಧ.

**1 ನೇರ ಸಂಬಂಧ**

ಕಾರ್ಯಾಲಯದಲ್ಲಿ ಮುಂಗಟ್ಟೆಯಲ್ಲಿನ ನೇರ ಸೇವೆ—ವೈಯಕ್ತಿಕವಾಗಿ ಆತನನ್ನು ಗುರುತಿಸುವುದು. ಸಂಬಂಧಪಟ್ಟ ಅಧಿಕಾರಿಗಳ ಜೊತೆಯೂ ಆಗಾಗ ಭೇಟಿ. ಕ್ಷೇತ್ರಾಧಿಕಾರಿಯ ಸತತ ಭೇಟಿ. ಠೆಂಗೆ ಹಾಗೂ ಇತರ ವಿಷಯಗಳಲ್ಲಿ ಸಲಹೆ, ಸೂಚನೆ. ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಿಕೆ ಹಾಗೂ ಗ್ರಾಹಕರ ಪರವಾಗಿ ವಿದ್ಯುತ್ ಬಿಲ್ಲುಗಳು ಮುಂತಾದವುಗಳ ಪಾವತಿ, ಸ್ಥಾಯಿ ಆದೇಶಗಳ ಪಾಲನೆ, ಗುಂತಾವಣೆ, ಷೇರು ಮಾರುಕಟ್ಟೆ, ಹಣ ದುಬ್ಬರ, ಇತ್ಯಾದಿ ಹಣ ಮಾರುಕಟ್ಟೆಯ ವಿವರಗಳ ತಿಳುವಳಿಕೆ ನೀಡುವುದು. ಆಗಾಗ ಗ್ರಾಹಕರ ಸಭೆ ಕರೆಯುವುದು. ಅವರೊಡನೆ ಸಮಾಲೋಚಿಸುವುದು. ಬ್ಯಾಂಕಿನ ಸ್ವಚ್ಛ ಪರಿಸರ, ಸೌಂದರ್ಯ ವಾತಾವರಣ ಮೂಡಿಸುವುದು.

**2 ಪರೋಕ್ಷ ಸಂಬಂಧ**

ಇದನ್ನು ಜಾಹೀರಾತು, ಕರಪತ್ರ, ನಿಯತಕಾಲಿಕಗಳ ಪ್ರಕಟಣೆ ಇವುಗಳ ಮೂಲಕ ಬೆಳೆಸಬೇಕು.

ಅಲ್ಲದೆ ಇವುಗಳೆಲ್ಲ ಸದ್ಯದ ಗ್ರಾಹಕರಿಗಾದರೆ, ಭಾವೀ ಗ್ರಾಹಕರ ಬಗ್ಗೆಯೂ ಅನೇಕ ಕ್ರಮ ಕೈಗೊಳ್ಳಬಹುದಾಗಿದೆ.

**ನೇರವಾಗಿ**

ವಿಸ್ತರಣ ಶಾಖೆಗಳನ್ನು ತೆರೆಯುವುದು. ನಿರ್ದಿಷ್ಟ ಜನರಿಗಾಗಿ ಕೆಲವು ನಿರ್ದಿಷ್ಟರೂಪದ ಕಾರ್ಯಕ್ರಮಗಳ ಯೋಜನೆ, ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಲ್ಲಿ ಉಳಿತಾಯದ ಹವ್ಯಾಸ ಮೂಡುವಂತೆ ಮಾಡುವುದು ಹಾಗೂ ವಿದ್ಯಾಭ್ಯಾಸಕ್ಕಾಗಿ ಸಾಲ ನೀಡಿಕೆ.

**ಪರೋಕ್ಷವಾಗಿ**

ಜಾಹೀರಾತು, ಕರಪತ್ರ, ಆಕಾಶವಾಣಿ, ದೂರದರ್ಶನ, ಸಾರ್ವಜನಿಕ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವಿಕೆ, ಜಾತ್ರೆ ಸಮ್ಮೇಳನದಲ್ಲಿ ಪ್ರದರ್ಶನ. ಅಲ್ಲದೆ ಜನರು ಸಾಮಾನ್ಯವಾಗಿ ಸ್ಥಳಪಲ್ಲಟ, ಉದ್ಯೋಗ ಬದಲಾವಣೆ, ಅಭಿವೃದ್ಧಿಗಾಗಿ ಎದುರು ನೋಡುತ್ತಾರೆ. ಇಂತಹ ಜನರನ್ನು ಬೇರೆ ಬ್ಯಾಂಕುಗಳು ತಮ್ಮೆಡೆ ಸೆಳೆವ ಮುನ್ನ, ಅವರಲ್ಲಿ ನಮ್ಮ ಬ್ಯಾಂಕುಗಳ ಸೇವೆಯನ್ನು ಪಡೆಯುವ ಆಶೆ ಮೂಡಿಸಬೇಕು. ಆದಕ್ಕಾಗಿ ಸಾರ್ವಜನಿಕರೆಲ್ಲರೂ ಬ್ಯಾಂಕಿನೊಂದಿಗೆ ಉತ್ತಮ ಬಾಂಧವ್ಯವನ್ನು ನಿರೀಕ್ಷಿಸುವಂತಾಗಬೇಕು.

ಈ ಎಲ್ಲ ಕ್ರಮಗಳಲ್ಲದೆ ಜನಪ್ರಿಯ ವ್ಯಕ್ತಿ



# ಬ್ಯಾಂಕುಗಳು ಮತ್ತು ಜನಧ್ವನಿ

**ಕನ್ನಡ ಕಾವಲು ಸಮಿತಿ ನಮ್ಮ ರಾಜ್ಯದಲ್ಲಿ ತೀವ್ರಗತಿಯಲ್ಲಿ ಕಾರ್ಯಾಚರಣೆಯಲ್ಲಿ ತೊಡಗಿದ್ದು ಸಂತೋಷದ ಸಂಗತಿ. ಅದು ವಾಣಿಜ್ಯ ಬ್ಯಾಂಕುಗಳತ್ತ ಅಷ್ಟಾಗಿ ಗಮನ ಹರಿಸದಿರುವುದು ಅಷ್ಟೇ ವಿಷಾದದ ಸಂಗತಿ**

## ಕೆ. ಶ್ರೀನಿವಾಸ

**ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್
ಮುಖ್ಯ ಶಾಖೆ, ರಾಯಚೂರು**

ನಮ್ಮ ಆಡುಭಾಷೆಯ ಬಗ್ಗೆ ಯಾವುದೇ ಕೂಗು ಕೇಳಿಬಂದಾಗಲೂ ಅದಕ್ಕೆ ಪ್ರಾದೇಶಿಕತೆಯ ಗೂಟೆ ಕೂರಿಸಿ ಅನುಮಾನಪಡುವ ಪ್ರವೃತ್ತಿ ಇಂದಿಗೂ ಬೆಳೆಯುತ್ತಲೇ ಇರುವುದು ಒಂದು ದುರಂತ. ಇಂತಹ ಯಾವುದೇ ಅನಿಸಿಕೆ, ಬೇಡಿಕೆ ಅಥವಾ ಚಳವಳಿಯನ್ನು ಸಾರಾಸಗಟಾಗಿ ತೆಗೆದು ಹಾಕುವಂತಿಲ್ಲ. ಭಾಷೆ ಎಂಬುದು ಜನರ ಜೀವನಾಡಿ. ಅದು ಅವರ ಅಂತರಾಳದ ಧ್ವನಿ. ಆ ಧ್ವನಿಯನ್ನು ಕುಗ್ಗಿಸಲು ಅಥವಾ ಬಗ್ಗುಬಡಿಯಲು ಯಾರೇ ಪ್ರಯತ್ನಿಸಿದರೂ ಅವರು ಸಿಡಿದೇಳಬಲ್ಲರು. ಬ್ಯಾಂಕಿನಂತಹ ಸೇವಾ ಸಂಸ್ಥೆಗಳು ಜನರ ಜೀವನದ ಆಳವನ್ನು ಹೊಕ್ಕು ಅವರಲ್ಲೊಂದಾಗಲು ಪ್ರಯತ್ನಿಸುವಂತಾಗಬೇಕಾದರೆ, ಅವು ಅವರ ಭಾಷೆಯಲ್ಲೇ ಮಾತನಾಡುವಂತಾಗಬೇಕು.

ಒಂದು ಪ್ರದೇಶದ ಭಾಷೆ ಅಥವಾ ಸಂಸ್ಕೃತಿಗೆ ಸ್ಪಂದಿಸದ ಯಾವುದೇ ಸಂಸ್ಥೆಯೂ ಅಲ್ಲಿನ ಜನರ ಪ್ರೀತಿಯನ್ನು ಸುಲಭವಾಗಿ ಗಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಬ್ಯಾಂಕುಗಳು ಇಂದು ಜನರ ಪ್ರೀತಿಯನ್ನಷ್ಟೇ ಗಳಿಸಬೇಕಾಗಿಲ್ಲ. ಅವು ಪ್ರೀತಿಯನ್ನು ಗಳಿಸುವುದರೊಂದಿಗೆ ಅವರ ಸ್ನೇಹವನ್ನೂ ಸಂಪಾದಿಸಬೇಕಿದೆ ; ಸೇವೆಯನ್ನೂ ಮಾಡಬೇಕಿದೆ.

ಈ ಎರಡೂ ಕಾರ್ಯಗಳ ಸಾಧನೆಯಾಗಬೇಕಾದರೆ ಬ್ಯಾಂಕುಗಳು ತಮ್ಮ ಗ್ರಾಹಕನಿಗೆ ತಿಳಿಯುವ ಭಾಷೆಯಲ್ಲೇ ವ್ಯವಹರಿಸಬೇಕು. ಆಗಲೇ ಅವು ತಮ್ಮ ಉದ್ದೇಶಿತ ಗುರಿಯನ್ನು ತಲುಪಲು ಸಾಧ್ಯ. ಈ ಮಾತುಗಳ ಹಿನ್ನೆಲೆಯಲ್ಲಿ ಬ್ಯಾಂಕುಗಳು ನಮ್ಮ ನಾಡಿನ ಜನತೆಯ ಭಾವನೆಗಳಿಗೆ ಎಷ್ಟರ ಮಟ್ಟಿಗೆ ಸ್ಪಂದಿಸುತ್ತಿವೆ ಎಂಬುದನ್ನು ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ.

ಬ್ಯಾಂಕುಗಳ ಕಾರ್ಯಕ್ಷೇತ್ರ ವಿಶಾಲವಾಗಿದೆ, ನಿಜ. ಅದರ ಕಾರ್ಯನಿರ್ವಹಣೆ ಬರೀ ಒಂದು ರಾಜ್ಯಕ್ಕೆ ಅಥವಾ ರಾಷ್ಟ್ರಕ್ಕೆ ಸೀಮಿತವಲ್ಲದಿರಬಹುದು. ಅದಕ್ಕೆಲ್ಲ ಇಂಗ್ಲಿಷ್ ಭಾಷೆಯ ಬಳಕೆ, ಹಿಂದಿ ಭಾಷೆಯ ಬಳಕೆ—ಹೀಗೆಲ್ಲ ಸಂವಿಧಾನ ಅನುಕೂಲ ಮಾಡಿಕೊಟ್ಟಿದೆ.

ಆದರೆ ಪ್ರಾದೇಶಿಕ ಭಾಷೆಯ ಪರಿಣಾಮಕಾರಿ ಬಳಕೆಗೆ ಹೆಚ್ಚು ಒತ್ತು ಕೊಡಬೇಕು. ಹಿಂದಿ ಬಳಕೆ ಕುರಿತಂತೆ ಸಂವಿಧಾನದ 1976ರ ಅಧಿಕೃತ ಭಾಷಾ ಅಧಿನಿಯಮದ 8ನೆಯ ಪ್ರಕರಣದ ಪ್ರಕಾರ ತಮಿಳುನಾಡೊಂದನ್ನು ಬಿಟ್ಟು ಇಡೀ ಭಾರತಕ್ಕೆ ಅನ್ವಯಿಸುವ ನೀತಿಯನ್ನು ಈಗಾಗಲೇ ನಾವು ಒಪ್ಪಿಕೊಂಡಾಗಿದೆ!

ಈ ನೀತಿಯ ಪ್ರಕಾರ ಎ, ಬಿ ಮತ್ತು ಸಿ

---

ಗಳಾದ ಸಿಬ್ಬಂದಿಗಳು (ಉದಾ : ಕ್ರೀಡಾಪಟುಗಳು ಹಾಗೂ ಇತರರಿಂದ ಜನಸಂಪರ್ಕ ಸಭೆಗಳನ್ನು ಏರ್ಪಡಿಸಬೇಕು.

ಇಂದು ದುರ್ದೈವವಶಾತ್ ರಾಜಕಾರಣಿಗಳ ಅಗ್ಗದ ಜನಪ್ರಿಯತೆಗಾಗಿ ಬ್ಯಾಂಕುಗಳು ಬಲಿ ಬೀಳಬೇಕಾದುದೇ ಅಲ್ಲದೆ, ಮುಗ್ಧರು ಬ್ಯಾಂಕಿನ ಬಗ್ಗೆ ತಪ್ಪು ಅಭಿಪ್ರಾಯ ಮೂಡುವಂತಾದರೆ ಅದರ ನಿವಾರಣೆಗೂ ಸೂಕ್ತಕ್ರಮ ಅಗತ್ಯ. ಅಂದರೆ ಅಂತಹ ಜನರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು, ಅವರಲ್ಲಿ ಬ್ಯಾಂಕು ಹಾಗೂ ಸಾಮಾಜಿಕ ಜವಾಬ್ದಾರಿ, ಅವರ ನೈತಿಕ ಜವಾಬ್ದಾರಿ ಇವುಗಳ ಅರಿವು ಮೂಡಿಸುವ ಕ್ರಮವನ್ನು ಬ್ಯಾಂಕು ಕೈಗೊಳ್ಳಬೇಕಾಗಿದೆ.

ಹೀಗೆ ಬ್ಯಾಂಕು ತನ್ನ ಉದ್ದಿಮೆಯಲ್ಲಿ ಸಫಲತೆಯನ್ನು ಪಡೆಯಲು ಗ್ರಾಹಕರ ಸಂಬಂಧವನ್ನು ಉತ್ತಮವಾಗಿಸಿಕೊಳ್ಳಬೇಕಾಗಿದೆ. ★

ಎಂಬ ಮೂರು ಭಾಷಾ ಪ್ರಾಂತಗಳನ್ನು ವಿಂಗಡಿಸಿದ್ದು, 'ಎ' ಭಾಗದಲ್ಲಿ ಬಿಹಾರ, ಹರಿಯಾಣ, ಹಿಮಾಚಲ ಪ್ರದೇಶ, ಮಧ್ಯ ಪ್ರದೇಶ, ರಾಜಸ್ಥಾನ, ಉತ್ತರ ಪ್ರದೇಶ ಮತ್ತು ಕೇಂದ್ರಾಡಳಿತ ಪ್ರದೇಶವಾದ ದೆಹಲಿ (ಹಿಂದಿ ಮಾತನಾಡುವ ಪ್ರದೇಶಗಳು) ಸೇರಿದ್ದು, 'ಬಿ' ಭಾಗದಲ್ಲಿ ಗುಜರಾತ್, ಮಹಾರಾಷ್ಟ್ರ, ಪಂಜಾಬ್, ಕೇಂದ್ರಾಡಳಿತ ಪ್ರದೇಶವಾದ ಅಂಡಮಾನ ನಿಕೋಬಾರ್ ದ್ವೀಪಗಳು, ಚಂದೀಗಢ ಸೇರಿದ್ದು, 'ಸಿ' ಭಾಗದಲ್ಲಿ ಮೇಲೆ ಹೇಳಿದ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳನ್ನು ಬಿಟ್ಟು ಉಳಿದ ರಾಜ್ಯಗಳು ಸೇರಿವೆ.

ತಮಿಳು ನಾಡೊಂದನ್ನು ಬಿಟ್ಟು 'ಇಡೀ ಭಾರತ'ಕ್ಕೆ ಅನ್ವಯಿಸಲಾದ ಈ ನೀತಿಯ ಬಗ್ಗೆ ನಮ್ಮ ಆಕ್ಷೇಪವಿಲ್ಲ. ಆದರೆ ಒಂದು ಕ್ಷಣ ಯೋಚಿಸೋಣ. ಇಲ್ಲಿ 'ತಮಿಳು ನಾಡೊಂದನ್ನು ಬಿಟ್ಟು' ಎಂಬ ಪದದ ಬದಲಿಗೆ 'ಕರ್ನಾಟಕವೊಂದನ್ನು ಬಿಟ್ಟು' ಎಂಬ ಪದ ಇರಲು ಸಾಧ್ಯವಿತ್ತೆ ?

ಪ್ರಾಯಶಃ ಉತ್ತರ 'ಇಲ್ಲ' ಎಂದೇ ಹೇಳಬೇಕು. 'ನಮ್ಮಲ್ಲಿ ಹಿಂದಿಯನ್ನು ಪ್ರವೇಶಿಸಲು ಬಿಡುವುದಿಲ್ಲ' ಎಂದು ಕನ್ನಡಿಗರು ಧೈರ್ಯವಾಗಿ ಹೇಳಲಾರರು. ಬರೀ ಕನ್ನಡಿಗರಷ್ಟೇ ಅಲ್ಲ ಯಾವ ಭಾರತೀಯನೂ ಹೇಳಬಾರದು ಎಂದು ಭಾವಿಸಲಾಗಿದೆ.

ಭಾಷೆಯ ಬಗ್ಗೆ ಮಾತನಾಡುವಾಗ ಬರೀ ಅಂಧಾಭಿಮಾನ ಮಾತ್ರ ಸಾಲುವುದು ನೇಡ. ವಿವೇಕದಿಂದ ವಿವೇಚಿಸುವ ಗುಣ ಬೇಕು. ಆ ಗುಣ ಕನ್ನಡಿಗನಲ್ಲಿದೆ. ಅಷ್ಟೇ ಅಲ್ಲ : ಒಮ್ಮೊಮ್ಮೆ ಸ್ವಂತಿಕೆಗೆ ಸ್ವಲ್ಪ ಧಕ್ಕೆಯಾದರೂ ಸಹಿಸಿಕೊಳ್ಳುವ ಕೆಟ್ಟ ವಿಶಾಲಗುಣ ಕೂಡ ಅವನಲ್ಲಿದೆ! ವಿದೇಶದೊಂದಿಗೆ ವ್ಯವಹರಿಸುವಾಗ ಇಂಗ್ಲಿಷ್ ಬಳಸಿ, ಪಕ್ಕದ ರಾಜ್ಯಗಳೊಂದಿಗೆ ವ್ಯವಹರಿಸುವಾಗ ಹಿಂದಿ ಬಳಸಿ, ಇನ್ನು ನಮ್ಮನಮ್ಮಲ್ಲೇ ವ್ಯವಹರಿಸಿಕೊಳ್ಳುವಾಗ ನಾವು ಕನ್ನಡವನ್ನು ಯಾಕಾದರೂ ಮರೆಯಬೇಕು ?

ಇವತ್ತು ಭಾರತದ ಯಾವುದೇ ಶ್ರೀಸಾಮಾನ್ಯ ವ್ಯಕ್ತಿ ಕೂಡ ಬ್ಯಾಂಕಿನ ಒಬ್ಬ ಪ್ರತಿಷ್ಠಿತ ಗ್ರಾಹಕ. 'ಗ್ರಾಹಕ' ಶಬ್ದದ ವ್ಯಾಪ್ತಿಯ ಅರ್ಥವ್ಯಾಪ್ತಿ ಕೂಡ ಈಚೆಗೆ ವಿಸ್ತಾರವಾಗಿರುವುದನ್ನು ಬ್ಯಾಂಕುಗಳು ಗಮನಿಸಬೇಕು. ಅವರ ಸೇವೆಯ ಫಲ ಸಮಾಜದ ಕಟ್ಟಕಡೆಯ ಮನುಷ್ಯನಿಗೂ ತಲುಪಬೇಕೆಂಬ ಆಶಯವೇ ಇದರ ಗುರಿ. ಆ ಕಟ್ಟಕಡೆಯ ಮನುಷ್ಯ ಖಂಡಿತವಾಗಿ ನಿರಕ್ಷರಿಯೂ ಬಡವನೂ ಶೋಷಿತನೂ ಆಗಿರುತ್ತಾನೆ. ಬ್ಯಾಂಕುಗಳು ಅವನನ್ನು ನಿಜವಾದ ಅರ್ಥದಲ್ಲಿ ತಲುಪಲು ಸಾಧ್ಯವಾಗುವುದು ಅವೂ ಅವನ ಮಾಧ್ಯಮವನ್ನು ಬಳಸಿದಾಗಲೇ.

ಗ್ರಾಮೀಣ ಬ್ಯಾಂಕುಗಳು ಮತ್ತು ಎಲ್ಲ ವಾಣಿಜ್ಯ ಬ್ಯಾಂಕುಗಳು ಆಡಳಿತದ ವಿವಿಧ ಹಂತಗಳಲ್ಲಿ ಕಡ್ಡಾಯವಾಗಿ ಕನ್ನಡ ವಿಭಾಗಗಳನ್ನು ತೆರೆದು ಅವುಗಳ ಮುಖ್ಯಸ್ಥರನ್ನಾಗಿ ಕನ್ನಡ ಭಾಷಾ ಅಧಿಕಾರಿಗಳನ್ನು ನೇಮಿಸಬೇಕೆಂದಾಗ ಕನ್ನಡ ಬೆರಳಚ್ಚು ಯಂತ್ರಗಳು ಪ್ರತಿ ಶಾಖೆಗೂ ದೊರಕುವಂತೆ ಮಾಡಿ, ಕನ್ನಡ ಬೆರಳಚ್ಚುಗಾರರನ್ನು ನೇಮಕ ಮಾಡಿಕೊಳ್ಳುವಂತೆ ಆಡಳಿತ ವರ್ಗದ ಮೇಲೆ ಒತ್ತಡ ತರಬೇಕೆಂದು ರಾಜ್ಯ ಸರಕಾರವನ್ನು ಒತ್ತಾಯಿಸುವ ಎಷ್ಟೋ ನಿರ್ಣಯಗಳು ಇನ್ನೂ ಕಾರ್ಯರೂಪಕ್ಕೆ ಬರಲೇ ಇಲ್ಲ.

ಹಿಂದಿಯ ನಾನಾ ಭಾಷಾ ಪರೀಕ್ಷೆಗಳು, ಶೀಘ್ರಲಿಪಿ, ಮತ್ತು ಬೆರಳಚ್ಚು ಪರೀಕ್ಷೆ ಮುಂತಾದುವುಗಳಲ್ಲಿ ಉತ್ತೀರ್ಣರಾದವರಿಗೆ ನೀಡುವ ಉತ್ತೇಜನಧನದಂತಹ ಪ್ರೋತ್ಸಾಹಕ ಯೋಜನೆಗಳು ಕನ್ನಡದ ಬಗ್ಗೆಯೂ ಜಾರಿಗೆ ಬರಬೇಕೆಂಬ ಬೇಡಿಕೆಗಳು ಅಪೇಕ್ಷಣೀಯ. ಪಾಟೀಲಪುಟ್ಟಪ್ಪನವರ ನೇತೃತ್ವದ ಕನ್ನಡ ಕಾವಲು ಸಮಿತಿ ರಾಜ್ಯದಲ್ಲಿ ತೀವ್ರಗತಿಯಲ್ಲಿ ಕಾರ್ಯಾಚರಣೆಯಲ್ಲಿ ತೊಡಗಿದ್ದು ಸಂತೋಷದ ವಿಚಾರವೇ. ಆದರೆ ಸಮಿತಿ ವಾಣಿಜ್ಯ ಬ್ಯಾಂಕುಗಳತ್ತ ಅಷ್ಟಾಗಿ ಗಮನ ಹರಿಸಿಲ್ಲದಿರುವುದೂ ಅಷ್ಟೇ ವಿಷಾದದ ಸಂಗತಿಯಾಗಿದೆ.

ಬ್ಯಾಂಕುಗಳು ಅತ್ತ ರಾಷ್ಟ್ರದ ಏಕತೆಯನ್ನು ದೃಷ್ಟಿಯಲ್ಲಿರಿಸಿಕೊಂಡು ಇತ್ತ ರಾಜ್ಯದ ಜನತೆಯ ಆಶೋತ್ತರಗಳನ್ನು ಈಡೇರಿಸಲು ಶ್ರಮಿಸಬೇಕಾದರೆ ಅವು ಜನಧ್ವನಿಯನ್ನು ಎತ್ತಿಹಿಡಿಯಬೇಕು. ಅದಕ್ಕೆ ಮಾರ್ದನಿ ಕೊಡಬೇಕು. ★

# ಸಹಕಾರಿ ಬ್ಯಾಂಕುಗಳಲ್ಲಿ ಬಾಕಿಯ ಹೆಚ್ಚಳ

**ನಮ್ಮ ಸಹಕಾರಿ ಬ್ಯಾಂಕುಗಳಿಗೆ ಐವರು ಗಂಡಂದಿರು. ಒಬ್ಬೊಬ್ಬ ಗಂಡನೂ ಒಂದೊಂದು ಕಡೆಗೆ ಎಳೆಯುವಾಗ ಈ ಪಾಪದ ಬ್ಯಾಂಕುಗಳು ಏನು ಮಾಡಬೇಕು? ಬಾಕಿ ಹೇಗೆ ವಸೂಲಾಗಬೇಕು? ಇಂಥ ಹಲವು ಹನ್ನೊಂದು ಕಾರಣಗಳ ವಿವೇಚನೆ ಇಲ್ಲಿದೆ.**

**ಎನ್. ಶ್ರೀಕಂಠೇಶ್ವರ**
ಸ್ಟೇಟ್ ಟ್ರೇಡಿಂಗ್ ಕಾರ್ಪೊರೇಷನ್
ಆಫ್ ಇಂಡಿಯ, ಕಸ್ತೂರಬಾ ರಸ್ತೆ
ಬೆಂಗಳೂರು 560 001

ದೇಶದ ಬ್ಯಾಂಕಿಂಗ್ ಇತಿಹಾಸದಲ್ಲಿ ವಾಣಿಜ್ಯ ಬ್ಯಾಂಕುಗಳನ್ನು ಬಿಟ್ಟರೆ ಸಹಕಾರಿ ಬ್ಯಾಂಕುಗಳು ಪ್ರಮುಖ ಪಾತ್ರ ವಹಿಸುತ್ತವೆ. ಇಂದು ವಿವಿಧ ರೀತಿಯ ಸಾಲಗಳು ಹಾಗೂ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ವಿವಿಧ ರೀತಿಯ ಸಹಕಾರಿ ಬ್ಯಾಂಕುಗಳಿವೆ. ಒಂದು ಕಾಲದಲ್ಲಿ, 1955ಕ್ಕೂ ಮುಂಚೆ, ವಾಣಿಜ್ಯ ಬ್ಯಾಂಕುಗಳು ಕೇವಲ ಶ್ರೀಮಂತ ನಗರಗಳಲ್ಲಿ ಇದ್ದು, ಲಾಭಗಳಿಕೆಯೇ ಉದ್ದೇಶವಾಗಿದ್ದಾಗ ದೇಶದ ಹಳ್ಳಿಗಾಡುಗಳಲ್ಲಿ ಸಹಕಾರಿ ಬ್ಯಾಂಕುಗಳು ಸಲ್ಲಿಸಿದ ಸೇವೆಯನ್ನು ಎಂದೂ ಯಾರೂ ಮರೆಯುವಂತಿಲ್ಲ. ಸಹಕಾರಿ ತತ್ವದ ಆಧಾರದ ಮೇಲೆ 'ಪ್ರಜಾಪ್ರಭುತ್ವ'ದ ಮಾದರಿಯಲ್ಲಿ ಸೇವಾ ಆದರ್ಶದಿಂದ ಸಹಕಾರಿ ಬ್ಯಾಂಕುಗಳು ಈ ಶತಮಾನದ ಆದಿಯಿಂದಲೂ ಕಾರ್ಯಾಚರಣೆ ನಡೆಸುತ್ತಿವೆ.

## ಸಾಲ ನೀಡಿಕೆ

ಸಹಕಾರಿ ಬ್ಯಾಂಕುಗಳು ಸಣ್ಣ ಹಳ್ಳಿಗಳಿಂದ ಹಿಡಿದು ದೊಡ್ಡ ದೊಡ್ಡ ನಗರಗಳ ವರೆಗೂ ಹಬ್ಬಿದ್ದು, ವ್ಯವಸಾಯ, ಕೈಗಾರಿಕೆ, ವ್ಯಾಪಾರ ಹಾಗೂ ದೇಶದ ಇತರ ಅಭಿವೃದ್ಧಿ ಚಟುವಟಿಕೆಗಳಿಗೆ ಸಾಲ ನೀಡುತ್ತಿವೆ. ಅವು ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲಗಳು. ಬೇಸಾಯದ ಸಾಲ ನೀಡುವಲ್ಲಿ ಸಹಕಾರಿ ಬ್ಯಾಂಕುಗಳು ಇತರ ವಾಣಿಜ್ಯ ಬ್ಯಾಂಕುಗಳಿಗಿಂತ ಮುಂದಿದ್ದು ಹೆಚ್ಚು ಜನಪ್ರಿಯವಾಗಿವೆ. ಸರ್ಕಾರ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸುವುದಕ್ಕೆ ಮುಂಚೆ ಸಹಕಾರಿ ಬ್ಯಾಂಕುಗಳು ರೈತರಿಗೆ ಸಾಲ ನೀಡುವಲ್ಲಿ ಯಶಸ್ವಿಯಾಗಿದ್ದುವು. 1949ರಲ್ಲಿ ಸಹಕಾರಿ ಬ್ಯಾಂಕುಗಳ ಸಾಲ ನೀಡಿಕೆ ಶೇ. 2.1

ಇದ್ದದ್ದು 1980ರ ವೇಳೆಗೆ ಶೇ. 30ಕ್ಕೆ ಮುಟ್ಟಿತ್ತು.

## ಬಾಕಿಯ ಹೆಚ್ಚಳ

ಸಹಕಾರಿ ಬ್ಯಾಂಕುಗಳ ಬಾಕಿ ದಿನೇದಿನೇ ಹೆಚ್ಚುತ್ತಿದೆ. ಒಟ್ಟು ಶೇಕಡಾವಾರು ವಸೂಲಿ ಇತರ ಬ್ಯಾಂಕುಗಳದಕ್ಕಿಂತ ಉತ್ತಮ ಎನಿಸಿದರೂ ಪ್ರತ್ಯೇಕವಾಗಿ ಸಹಕಾರಿ ಬಾಕಿ ಹೆಚ್ಚುತ್ತಿದ್ದು ಅದರ ಸುಧಾರಣೆ ಕಂಡುಬರುತ್ತಿರುವುದು ಬಹಳ ವಿರಳ. ಶೇ. 50ರಿಂದ 60ರ ವರೆಗೂ ಸಾಲದ ಬಾಕಿ ವಸೂಲಾಗದೆ ನಿಂತಿದೆ. ಅದಕ್ಕೆ ಹಲವಾರು ಕಾರಣಗಳನ್ನು ನಾವು ನೋಡಬಹುದು.

## ಆಡಳಿತವರ್ಗ

ಸಹಕಾರಿ ಬ್ಯಾಂಕುಗಳಲ್ಲಿ ಬಾಕಿ ಹೆಚ್ಚಲು ಅದರ ಆಡಳಿತ ವರ್ಗವೇ ಪ್ರಮುಖ ಕಾರಣ. ನಿರ್ದೇಶಕ ಮಂಡಳಿಗೆ ಚುನಾಯಿತರಾಗುವ ನಿರ್ದೇಶಕರಿಗೆ ಬ್ಯಾಂಕಿಂಗಿನ ಅ, ಆ, ಇ, ಈ ಗೊತ್ತಿರುವುದಿಲ್ಲ. ಹೆಬ್ಬೆಟ್ಟು ಒತ್ತುವವರೂ ನಿರ್ದೇಶಕರಾಗಿರುತ್ತಾರೆ. ಇಂತಹವರು ಸಾಲ ನೀಡಿಕೆ ಹಾಗೂ ವಸೂಲಾತಿಗೆ ಯಾವ ರೀತಿ-ನೀತಿಗಳನ್ನು ರೂಪಿಸುತ್ತಾರೆ ? ಎಲ್ಲ ಅಧಿಕಾರವನ್ನು ತಮ್ಮಲ್ಲೇ ಇಟ್ಟುಕೊಂಡು, ನೌಕರರನ್ನು ಶೋಷಿಸಿ, ಬ್ಯಾಂಕುಗಳನ್ನು ಅಧೋಗತಿಗಿಳಿಸುವ ಆಡಳಿತ ವರ್ಗದವರೇ ಸಹಕಾರಿ ಬಾಕಿ ಹೆಚ್ಚಲು ಕಾರಣಕರ್ತರು. ಯಾರು ಬೇಕಾದರೂ ಬ್ಯಾಂಕಿನ ನಿರ್ದೇಶಕರಾಗಬಹುದೆ ? ಬಹುಪಾಲು ಆಡಳಿತ ಮಂಡಳಿಗೆ ಬ್ಯಾಂಕಿನ ಅಭಿವೃದ್ಧಿ ಬೇಕಿರುವುದಿಲ್ಲ. ನಿರ್ದೇಶಕರುಗಳು ಬ್ಯಾಂಕಿನ ಅಭಿವೃದ್ಧಿ ನೀತಿಗಳನ್ನು ರೂಪಿಸುವುದನ್ನು ಬಿಟ್ಟು ದೈನಂದಿನ ಚಟುವಟಿಕೆಯಲ್ಲಿ ಅನಾವಶ್ಯಕವಾಗಿ ಭಾಗವಹಿಸುತ್ತಾರೆ. ತಮ್ಮ ಸ್ವಂತ ಹಿತಕ್ಕೋಸ್ಕರ, ಆಸ್ತಿ ಸಂಪಾದನೆಗೋಸ್ಕರ ಚುನಾಯಿತರಾಗಿ ಬಂದು ಬ್ಯಾಂಕುಗಳನ್ನು ಚಿಂತಾಜನಕ ಪರಿಸ್ಥಿತಿಗಿಳಿಸಿರುವ ಸಂದರ್ಭಗಳು ಹಲವಾರು. ಇಂದು ಇದ್ದ ನೀತಿ ನಿಯಮ ನಾಳೆ ಇರುವುದಿಲ್ಲ. ಅವರಿಗೆ 'ಅಭಿವೃದ್ಧಿ ಬ್ಯಾಂಕಿಂಗ್' ಎಂದರೇನೆಂಬುದೇ ಗೊತ್ತಿರುವುದಿಲ್ಲ. ತಮಗೆ ಬೇಕಾದವರಿಗೆ ಸಾಲ ನೀಡುತ್ತ ಅದರ ವಸೂಲಿಗೆ ಕಿಂಚಿತ್ತೂ ಗಮನವೀಯದೆ ಇರುವ ಆಡಳಿತ ವರ್ಗದವರಿಂದ ಸಹಕಾರಿ ಬ್ಯಾಂಕುಗಳು ಸಣ್ಣಾಗಾಗುತ್ತಿವೆ. ಇಲ್ಲಿ ದೊಡ್ಡ ದೊಡ್ಡ 'ಬಹಳ ಮುಖ್ಯ ವ್ಯಕ್ತಿ' ಸಾಲಗಾರರು ಸುಸ್ತಿದಾರರು. ಕೇವಲ ರೂ. 500 ಪಡೆದುಕೊಂಡ ಸಾಲಗಾರ 'ಒಳ್ಳೆಯ ಗ್ರಾಹಕ.' ಇಲ್ಲಿರುವ ತಿಮಿಂಗಿಲಗಳಂತಹ ಸಾಲಗಳು ವಸೂಲಿಯಾದರೆ ಬಾಕಿ ಕನಿಷ್ಠಮಟ್ಟಕ್ಕೆ ಇಳಿಯುತ್ತದೆ. ಈ ಬ್ಯಾಂಕುಗಳ ಆಡಳಿತ ವರ್ಗದವರು ತಾವು ಅಧಿಕಾರದಲ್ಲಿ ಇರುವವರೆಗೆ ಬ್ಯಾಂಕು ತಮ್ಮ ಸ್ವಂತ ಆಸ್ತಿಯೇನು ಭಾವಿಸುತ್ತಾರೆ. ಇಷ್ಟಬಂದಂತೆ, ದಕ್ಷ ಹಾಗೂ ನಿಷ್ಠಾವಂತ ನೌಕರರನ್ನು ವರ್ಗಮಾಡುತ್ತಾರೆ. ಇದರಿಂದಾಗಿ ವಸೂಲಾತಿಯ ಪರಿಸ್ಥಿತಿ ಬಿಗಡಾಯಿಸುತ್ತದೆ. 'ವಸೂಲಿ ಸಿಬ್ಬಂದಿ'ಯ ಮೇಲೆ ಪ್ರಭಾವ ಬೀರಿ ಸಾಲ ವಸೂಲಿಯಾಗದಂತೆ ತಡೆಯುತ್ತಾರೆ. ಈ ರೀತಿಯ ಹದಗೆಟ್ಟ ಆಡಳಿತ ವರ್ಗದವರ ಧೋರಣೆಗೆ ಯಾರು ಹೊಣೆ ? ಪ್ರತ್ಯಕ್ಷ ಕಂಡಂತೆ, ಆಡಳಿತ ವರ್ಗದವರಿಗೆ ಬ್ಯಾಂಕಿನ ಸಾಲ ವಸೂಲಾದರೇನು ? ಬಿಟ್ಟರೇನು ? ಮೂರು ವರ್ಷ ಇದ್ದು ಹೋಗುವವರಿಗೆ ಇದೆಲ್ಲಾ ಯಾಕೆ ಬೇಕು ? ಇಂತಹ ಕೆಟ್ಟ ಚಿಂತನೆಗಳಿಂದ ಸಹಕಾರಿ ಬ್ಯಾಂಕುಗಳಲ್ಲಿ ಬಾಕಿಯ ಹೆಚ್ಚಳ ನಿರಂತರವಾಗಿ ಹೆಚ್ಚುತ್ತಿದೆ. ದಾತೆ ಸಮಿತಿಯ ವರದಿಯಂತೆ 'ಸಾಲ ವಸೂಲಾತಿ'ಗೆ ಆಡಳಿತ ವರ್ಗದವರು ಕೂಡ ಜವಾಬ್ದಾರರು.

## ಎಲ್ಲರೂ ಒಡೆಯರು

ಸಹಕಾರಿ ಬ್ಯಾಂಕುಗಳಿಗೆ ಎಷ್ಟು ಕಡೆಯಿಂದ ಆಡಳಿತ ? ಒಂದು, ರಾಜ್ಯ ಸರ್ಕಾರ. ಎರಡು, ಭಾರತೀಯ ರಿಸರ್ವ್ ಬ್ಯಾಂಕ್. ಮೂರು, ರಿಜಿಸ್ಟ್ರಾರರ ಬಿಗಿಮುಷ್ಟಿ. ನಾಲ್ಕು, ಸದಸ್ಯರುಗಳು. ಕೊನೆಯದಾಗಿ ಆಡಳಿತ ವರ್ಗದವರ ದುರಾಸಕ್ತಿ. ಇಷ್ಟು ಕಡೆಯಿಂದ ಬರುವ ಒತ್ತಡಕ್ಕೆ ಸಹಕಾರಿ ಬ್ಯಾಂಕುಗಳು ಸಿಲುಕಿವೆ. ಯಾರ ನಿರ್ದೇಶನವನ್ನು ಪಾಲಿಸಬೇಕು ? ರಿಸರ್ವ್ ಬ್ಯಾಂಕಿನದೇ, ಸರ್ಕಾರದ್ದೇ, ಸದಸ್ಯರುಗಳದೇ ಅಥವಾ ಬ್ಯಾಂಕುಗಳ ಮೇಲೆ ಬಿಗಿಮುಷ್ಟಿ ಹಿಡಿದಿರುವ ರಿಜಿಸ್ಟ್ರಾರರದೆ ? ಮೇಲ್ಕಂಡ ಪ್ರತಿಯೊಂದು ಕಡೆಯಿಂದಲೂ ಒಂದೊಂದು ರೀತಿಯ, ಪರಸ್ಪರ ವಿರುದ್ಧ ಆದೇಶಗಳು ಬರುತ್ತವೆ. ಇಂತಹ ನಿರ್ದೇಶನಗಳಿಂದ ಬರಬೇಕಾದ ಬಾಕಿ ವಸೂಲಿಯಾಗದೆ ಹಾಗೇ ಉಳಿಯುತ್ತದೆ. ಸಹಕಾರಿ ಬ್ಯಾಂಕುಗಳನ್ನು ಮೊದಲು ರಿಜಿಸ್ಟ್ರಾರರ ಬಿಗಿಮುಷ್ಟಿಯಿಂದ ತಪ್ಪಿಸಬೇಕು. ಸಣ್ಣ-ಪುಟ್ಟ ವಿಷಯಕ್ಕೂ ರಿಜಿಸ್ಟ್ರಾರರ ಒಪ್ಪಿಗೆ ಬೇಕಾದರೆ ಆಡಳಿತ ಮಂಡಳಿ ಏಕೆ ಬೇಕು ? ಸರ್ಕಾರ ಹೇಳಿದ್ದನ್ನು ರಿಸರ್ವ್ ಬ್ಯಾಂಕ್ ಆಗಲಿ, ರಿಸರ್ವ್ ಬ್ಯಾಂಕ್ ಹೇಳಿದ್ದನ್ನು ಆಡಳಿತ ಮಂಡಳಿಯಾಗಲಿ, ಆಡಳಿತ ಮಂಡಳಿ ಹೇಳಿದ್ದನ್ನು ರಿಜಿಸ್ಟ್ರಾರರಾಗಲಿ ಒಪ್ಪದೆ, ಒಂದಕ್ಕೊಂದು ತಾಳೆ ಹೊಂದದೆ, ಸಹಕಾರಿ ಬ್ಯಾಂಕುಗಳ ಚಟುವಟಿಕೆ ಕುಂಠಿತಗೊಳ್ಳುತ್ತಿವೆ. ಈ ತರಹದ ಕಷ್ಟಗಳಿಂದ ಬರಬೇಕಾದ ಬಾಕಿ ವಸೂಲಾಗದೆ ಹಾಗೆಯೇ ನಿಂತಿದೆ.

## ಸರ್ಕಾರದ ಪ್ರತಿನಿಧಿಗಳು

ಸಹಕಾರಿ ಬ್ಯಾಂಕುಗಳಿಗೆ ಸರ್ಕಾರದ ಪರವಾಗಿ 'ಕಾರ್ಯದರ್ಶಿ'ಗಳಾಗಿ ಪ್ರತಿನಿಧಿಗಳನ್ನು ಕಳಿಸುತ್ತಾರೆ. ಇವರಿಗೆ ನಿಜವಾದ ಬ್ಯಾಂಕಿಂಗ್ ಗೊತ್ತಿರುವುದಿಲ್ಲ. ಬ್ಯಾಂಕಿಂಗ್ ರೀತಿ-ನೀತಿ ಹಾಗೂ ನಿಯಮಗಳನ್ನು ಇವರು ಜಾರಿಗೆ ತರುವುದಿಲ್ಲ. ಅಂತಹವರನ್ನು ಬ್ಯಾಂಕುಗಳ ಮುಖ್ಯ ಅಧಿಕಾರಿಗಳಾಗಿ ನೇಮಿಸಿದರೆ ಬ್ಯಾಂಕುಗಳು ಹೇಗೆ ನಡೆಯುತ್ತವೆ ? ಇಂತಹ ಅಧಿಕಾರಿಗಳಿಗೆ 'ಉತ್ಪಾದನ ಸಾಮರ್ಥ್ಯ'ದ ಕೆಲಸ ತಿಳಿದಿರುವುದಿಲ್ಲ. ಸಾಲ ಕೊಡುವುದು ಹೇಗೆ, ವಸೂಲಾತಿ ಹೇಗೆ ಎಂಬುದು ಇವರಿಗೆ ಕಷ್ಟಕರವಾದ ವಿಷಯ. ಹೀಗಿರಬೇಕಾದರೆ ಬ್ಯಾಂಕುಗಳನ್ನು ನಡೆಸುವ ಉನ್ನತ ಜವಾಬ್ದಾರಿ ಹುದ್ದೆಗೆ ಏನೂ ತಿಳಿಯದ, ಅದರ ಗಂಧವಿಲ್ಲದ ಅಧಿಕಾರಿಗಳನ್ನು ಸರ್ಕಾರ ನೇಮಿಸಿದರೆ ಸಹಕಾರಿ ಬ್ಯಾಂಕುಗಳ ಸಾಲ ನೀಡಿಕೆ-ವಸೂಲಾತಿಯ ಮೇಲೆ ಪರಿಣಾಮ ಬೀಳುತ್ತದೆ.

## ಸಾಲದ ಪದ್ಧತಿ

ಸಹಕಾರಿ ಬ್ಯಾಂಕುಗಳಲ್ಲಿ ಜಾರಿಯಲ್ಲಿರುವ ಸಾಲದ ಪದ್ಧತಿ ಸಮರ್ಪಕವಾಗಿಲ್ಲ. ಅವು ನೀಡುತ್ತಿರುವ ಅಲ್ಪಾವಧಿ ಹಾಗೂ ದೀರ್ಘಾವಧಿ ಸಾಲಗಳು ಗ್ರಾಹಕರಿಗೆ ಸರಿಯಾಗಿ ಉಪಯುಕ್ತವಾಗದೆ ಅದರ ದುರುಪಯೋಗವೇ ಜಾಸ್ತಿ. ಉದಾ : ರೈತರಿಗೆ ನೀಡುವ ದೀರ್ಘಾವಧಿ ಸಾಲದ ವಾಪಸಾತಿ ಅವನ ಬೆಳೆಯನ್ನೇ ಅವಲಂಬಿಸಿರುತ್ತದೆ. ಬೆಳೆ ಬರುವ ಭರವಸೆ ಇರುವುದಿಲ್ಲ. ಅಂದಮೇಲೆ ಅವನಿಗೆ ದೀರ್ಘಾವಧಿ ಸಾಲ ಕೊಡುವುದು ಹೇಗೆ ? ರೈತರು ದೂರ ನೆಲೆಸಿದ್ದರೆ ಇನ್ನೂ ದುರುಪಯೋಗ ಜಾಸ್ತಿ. ಯಾವುದೇ ರೀತಿಯ ಸಾಲಗಳಾಗಲಿ ಪಡೆದುಕೊಳ್ಳುವವರಿಗೆ ಸಾಧನಗಳಾಗಬಾರದು. ಅದರಲ್ಲಿ ಉತ್ಪಾದನ ಸಾಮರ್ಥ್ಯವಿದ್ದು ಅದರ ಆದಾಯದಿಂದ ಸಾಲ ವಾಪಸಾತಿಗೆ ಸಂಪೂರ್ಣ ಅವಕಾಶವಿರಬೇಕು. ಅಂತಹ ಸಾಲದ ಪದ್ಧತಿ ಅನುಸರಿಸಬೇಕು. ಇಲ್ಲದಿದ್ದಲ್ಲಿ ಸಾಲ ಸುಸ್ತಿಯಾಗುತ್ತದೆ. ಸಾಲವನ್ನು ಗ್ರಾಹಕನಿಗೆ ಅವಶ್ಯವಿದ್ದಾಗ ಮಾತ್ರ ನೀಡಬೇಕು. ಇಂದು ಈ ಬ್ಯಾಂಕುಗಳಲ್ಲಿ 'ನಿಜವಾದ ಸಾಲಗಾರನನ್ನ' ಗುರುತಿಸದಿರುವುದೇ ಒಂದು ಪ್ರಮುಖ ಸಮಸ್ಯೆಯಾಗಿದೆ. ಒಬ್ಬ ಕೈಗಾರಿಕೋದ್ಯಮಿಗೆ ಕೈಗಾರಿಕೆ ಸಾಲ ನೀಡಿದರೆ ಆತ ತನ್ನ ಕೈಗಾರಿಕೆ ಪ್ರಾರಂಭಿಸಿದ ಅನಂತರ ಒಂದು ಹಂತಕ್ಕೆ ಬರಲು ಕನಿಷ್ಠ 6 ತಿಂಗಳು ಹಾಗೂ ಒಂದು ವರ್ಷ ಬೇಕು. ಹೀಗಿರುವಾಗ ಪಡೆದ ಸಾಲವನ್ನು ಆತ ಕೈಗಾರಿಕೆಯಲ್ಲಿ ತೊಡಗಿಸಿರಬೇಕಾದರೆ ಒಂದೇ ವರ್ಷದಲ್ಲಿ ಸಾಲ ಮರುಪಾವತಿ ಹೇಗೆ ಸಾಧ್ಯ ? ಇದರಿಂದ ಆತ ಸುಸ್ತಿದಾರನಾಗಿ ಬಾಕಿ ಸಾಲ ಹಾಗೇ ಉಳಿಯುತ್ತದೆ. ಈ ರೀತಿಯ ಸಾಲದ ಪದ್ಧತಿಗಳಿಂದ ಸಹಕಾರಿ ಬ್ಯಾಂಕುಗಳಲ್ಲಿ ಬಾಕಿ ಹೆಚ್ಚುತ್ತಿದೆ.

ಸಹಕಾರಿ ಬ್ಯಾಂಕುಗಳಲ್ಲಿ ಕಂಡುಬರುವ ಅಂಶವೆಂದರೆ, ಸಾಲ ನೀಡಿಕೆಯಲ್ಲಿ ರೀತಿ-ನೀತಿಗಳು ಸರಿಯಿಲ್ಲದಿರುವುದು. ಯಾವುದೇ ಸಾಲಕ್ಕೆ ನಮಗೆ ಆಧಾರ ಮುಖ್ಯವಲ್ಲ. ಬ್ಯಾಂಕು ಕೊಟ್ಟ ಸಾಲ

ದಿಂದ ಕನಿಷ್ಠ ಉತ್ಪಾದನೆಯಾದರೂ ಆಗಬೇಕು ; ಸಾಲಗಾರ, ಆತನ ಕೈಗಾರಿಕೆ, ಬೇಸಾಯ ಜೀವಂತವಾಗಿರಬೇಕು. ಕೆಲವು ಸಹಕಾರಿ ಬ್ಯಾಂಕುಗಳಲ್ಲಿ ಸಾಲಗಳಿಗೆ ಆಧಾರವಿದ್ದರೂ ಅವು ರೋಗಪೀಡಿತವಾಗಿವೆ. ಇಂತಹ ರೀತಿ–ನೀತಿಗಳಿಂದಾಗಿ ಸಾಲ ಪಡೆವ ಗ್ರಾಹಕರು ಸಾಲವನ್ನು ಬೇರೆ ಬೇರೆ ಕಾರ್ಯಗಳಿಗೆ ತೊಡಗಿಸುತ್ತಾರೆ. ಅದು ಮಗಳ ಮದುವೆಯಾಗಬಹುದು, ಮನೆ ಕಟ್ಟುವುದಾಗಿರಬಹುದು, ಅದನ್ನು ಸಾಲವಾಗಿ ಬೇರೆಯವರಿಗೆ ಕೊಡಬಹುದು ಅಥವಾ ಇನ್ಯಾವುದೇ ಕಾರಣಕ್ಕಾಗಿ ಅದನ್ನು ಉಪಯೋಗಿಸಬಹುದು. ಒಬ್ಬ ನಿಜವಾದ ಸಾಲಗಾರನಿಗೆ ಆತನ ಆವಶ್ಯಕತೆ, ಸಮಯ ಹಾಗೂ ಆತನಿಗೆ ಬೇಕಾಗುವಷ್ಟು ಸಾಲ ನೀಡದಿದ್ದರೆ ಬ್ಯಾಂಕುಗಳದೇ ತಪ್ಪಾಗಬಹುದು. ಇದರಿಂದಾಗಿ ಬಾಕಿ ಸಾಲ ಬರದೆ ಸುಸ್ತಿಯಾಗುತ್ತದೆ. ಉದಾ : ಸಾಲಗಾರ 1 ಲಕ್ಷ ಕೇಳಿದರೆ ಶೇ. 10 % ರಷ್ಟನ್ನು ಮಂಜೂರು ಮಾಡಿ ಆತನ ಬೇಡಿಕೆ ಪೂರೈಕೆಯಾಗದೆ ಸಾಲ ದುರುಪಯೋಗವಾಗಿ ವಸೂಲಾತಿ ಕಷ್ಟವಾಗುತ್ತದೆ. ಪ್ರಮುಖವಾಗಿ ಸಾಲವನ್ನು ನಗದುರೂಪದಲ್ಲಿ ಕೊಡಬಾರದು. ಅದು ಸರಕುಗಳ ರೂಪದಲ್ಲಿಯೇ ಸಲ್ಲಬೇಕು. ಸಾಮಾನ್ಯವಾಗಿ ಈ ಅಲ್ಪಾವಧಿ ಸಾಲಗಳು ನಗದು ರೂಪದಲ್ಲಿರುವುದರಿಂದ ಸಾಲ ಸದುಪಯೋಗವಾಗದೆ, ಸಾಲದ ಉದ್ದೇಶ ಈಡೇರುವುದಿಲ್ಲ. ಇಂತಹ ಅಸಮರ್ಪಕ ನೀತಿಗಳಿಂದ ಬಾಕಿಯು ಹೆಚ್ಚಳಕ್ಕೆ ಅವಕಾಶ ಜಾಸ್ತಿ.

## ರಾಜಕೀಯ ಹಸ್ತಕ್ಷೇಪ

ಇಂದು ಸಹಕಾರಿ ಬ್ಯಾಂಕುಗಳ ಬಾಕಿ ಜಾಸ್ತಿಯಾಗಲು ರಾಜಕೀಯ ಹಸ್ತಕ್ಷೇಪವೂ ಒಂದು ಕಾರಣ. ಪ್ರತಿಯೊಂದು ಸಾಲಕ್ಕೂ ಅದನ್ನು ನೀಡುವಾಗ ಹಾಗೂ ವಸೂಲಿ ಮಾಡುವಾಗ ರಾಜಕೀಯ ಪ್ರವೇಶ ಮಾಡುತ್ತದೆ. ಇದು ತುಂಬಾ ವಿಷಾದನೀಯ ಸಂಗತಿ. ನಿಜವಾಗಿ ಸಹಕಾರಿ ಬ್ಯಾಂಕುಗಳಲ್ಲಿ ಸಹಕಾರಿ ತಂತ್ರಗಳು ಕೆಲಸ ಮಾಡುತ್ತಿಲ್ಲ: ಅಲ್ಲಿರುವ ವ್ಯಕ್ತಿಗಳು ಕೆಲಸ ಮಾಡುತ್ತಿದ್ದಾರೆ ಎಂದರೆ ತಪ್ಪಾಗಲಾರದು. ಇದರಿಂದಾಗಿ ಬಾಕಿ ಸಾಲ ಏರುತ್ತಿದ್ದು ಇಂತಹ ರಾಜಕೀಯ ಹಸ್ತಕ್ಷೇಪವನ್ನು ತಡೆಯದಿರುವುದು ಸಹಕಾರಿ ಬ್ಯಾಂಕುಗಳಲ್ಲಿರುವ ಕೊರತೆ. ಕೆಲವರಿಗೆ 'ರಾಜಕೀಯದ ಬಾಗಿಲು'ಗಳಾಗಿರುವ ಸಹಕಾರಿ ಬ್ಯಾಂಕುಗಳು ಬೇಕಾದಾಗ ಕೂಡಲೇ ಸಾಲವನ್ನು ಒದಗಿಸಿದ ಸಂದರ್ಭಗಳಿವೆ. ಇಂತಹ ಸಾಲಗಳು ಸುಸ್ತಿಯಾಗಿ ಬಾಕಿ ಉಳಿದಿರುವುದೇ ಜಾಸ್ತಿ.

## ನಿಯಂತ್ರಣರಾಹಿತ್ಯ

ಸಹಕಾರಿ ಬ್ಯಾಂಕುಗಳಲ್ಲಿ ಸಾಮಾನ್ಯವಾಗಿ ಕಂಡು ಬರುವುದು ಸಾಲವನ್ನು ಕೊಟ್ಟನಂತರ ಅದರ ಮೇಲಿನ ಹಿಡಿತ ಹಾಗೂ ಮೇಲ್ವಿಚಾರಣೆ ಇಲ್ಲದಿರುವುದು. ಇದರಿಂದಾಗಿ ಲಕ್ಷಗಟ್ಟಲೆ ಸಾಲ ಸುಸ್ತಿಯಾಗಿದೆ. ಇದಕ್ಕೆ ಕಾರಣ ಆಡಳಿತ ವರ್ಗವೇ. ಈ ಬಗ್ಗೆ ನೌಕರರು ಕಾರಣವಿದ್ದರೆ ಅದು ಆಡಳಿತ ವರ್ಗದವರ ನಿರ್ದೇಶನದಿಂದ. ಆದರೆ ಬ್ಯಾಂಕಿನಿಂದ ಹೊರಗೆ ನೀಡಿದ ಪ್ರತಿಯೊಂದು ಪೈಸಕ್ಕೂ ಮೇಲ್ವಿಚಾರಣೆ ಹಾಗೂ ಹಿಡಿತ ಇರಬೇಕು. ಲಕ್ಷಗಟ್ಟಲೆ ಸಾಲ ನೀಡಿ ಅದರ ಸಮರ್ಪಕ ಮೇಲ್ವಿಚಾರಣೆ ಇಲ್ಲದಿದ್ದರೆ ಸಾಲ ಸುಸ್ತಿಯಾಗಿ ಬಾಕಿ ಉಳಿಯುತ್ತದೆ. ಸಾಲಗಾರರಿಗೆ ಭೇಟಿ ನೀಡದಿರುವುದು ಹಾಗೂ ತನಿಖೆ ನಡೆಸದಿರುವುದರಿಂದ ಸಾಲಗಾರರು ಬ್ಯಾಂಕಿಗೆ ಬರುವುದು ಕಮ್ಮಿಯಾಗುತ್ತದೆ. ಈ ಒಂದು ಕೊರತೆಗೆ ಇನ್ನೂ ಹಲವಾರು ಕಾರಣಗಳಿವೆ. ಅಂದರೆ ಆಗಿಂದಾಗ್ಗೆ ನೌಕರರ ವರ್ಗಾವರ್ಗಿ, ಆಡಳಿತ ವರ್ಗದವರ ಬದಲಾವಣೆ, ಸರಿಯಾದ ಅಂಕಿ-ಅಂಶಗಳನ್ನಿಡದಿರುವುದು, ದಾಖಲಾತಿಗಳು ಸರಿಯಿಲ್ಲದಿರುವುದು, ಲೆಕ್ಕ ಹಾಗೂ ಕಡತಗಳನ್ನು ಒಂದು ವೈಜ್ಞಾನಿಕ ರೀತಿಯಲ್ಲಿಡದಿರುವುದು ಮುಂತಾದ ಕಾರಣಗಳಿಂದಾಗಿ ಬಾಕಿ ಹೆಚ್ಚುತ್ತಿದೆ.

## ವಸೂಲಾಗದ ಡಿಕ್ರಿ ಸಾಲಗಳು

ಸಹಕಾರಿ ಬ್ಯಾಂಕುಗಳಲ್ಲಿ ಸಾಲ ಡಿಕ್ರಿ ಆದಾಗ್ಯೂ ವಸೂಲಾಗದಿರುವುದು ಸಾಕಷ್ಟಿದೆ. ಜಪ್ತಿಮಾಡಿ ಸಾಲ ವಸೂಲಿ ಮಾಡುವ ಹಂತದಲ್ಲಿದ್ದಾಗ್ಯೂ ಯಾಕೆ ಕೋಟಿಗಟ್ಟಲೆ ಸಾಲ ವಸೂಲಿಯಾಗಿಲ್ಲ ? ಎಂಬ ಪ್ರಶ್ನೆಗೆ ನಾನಾ ಕಾರಣಗಳಿವೆ. ನಿಜ ಸಂಗತಿಯೆಂದರೆ, 'ವಿಕ್ರಯಾಧಿಕಾರಿ'ಗೆ ಡಿಕ್ರಿ ಸಾಲದ ಕಡತ ಬರುವ ವೇಳೆಗೆ 5–6 ವರ್ಷ ಬೇಕಾಗುತ್ತದೆ. ಆ ವೇಳೆಗೆ ಸಾಲಗಾರ ಆ ಊರಿನಲ್ಲಾಗಲಿ ಆ ವಿಳಾಸದಲ್ಲಾಗಲಿ ಇರುವುದಿಲ್ಲ. (ಕೆಲವರು ವಿದೇಶಕ್ಕೂ ಹೋಗಿದ್ದಾರೆ.) ಇನ್ನು ಹುಡುಕಬೇಕು. ಇದು ತುಂಬ ಸಮಯ ತೆಗೆದುಕೊಳ್ಳುವುದರಿಂದ ಸುಸ್ತಿ ಬಾಕಿ ಹಾಗೇ ಉಳಿಯುತ್ತದೆ. ಎರಡನೆಯದಾಗಿ, ಜಪ್ತಿ ಮಾಡಲು ಇರುವ ತೊಂದರೆಗಳು. ಒಂದೊಂದು ಹಂತದಲ್ಲೂ ಬ್ಯಾಂಕಿನ ಸಿಬ್ಬಂದಿ ಹಾಗೂ 'ವಿಕ್ರಯಾಧಿಕಾರಿ' ತೊಂದರೆಯನ್ನು ಎದುರಿಸಬೇಕಾಗುತ್ತದೆ. ಒಂದು ಕಡೆ ಕಾನೂನಿನ ತೊಡಕು, ಬೆದರಿಕೆ, ಗೂಂಡಾಗಿರಿ ಈ ತರಹದ ತೊಂದರೆಯಾದರೆ, ಜಪ್ತಿ ಮಾಡಿದರೂ ಸಾಕಷ್ಟು ಆಧಾರಮಾಡಿದ ಆಸ್ತಿಗಳು ಸಿಗದಿರುವುದು ಇನ್ನೊಂದು ಕಡೆ. ಇದರಿಂದ ಜಪ್ತಿಮಾಡಿದರೆ ಹಣವೂ ಬರುವುದಿಲ್ಲ, ಯಾವ ಉದ್ದೇಶವೂ ಈಡೇರುವುದಿಲ್ಲ. (ಉದಾ : ಸಾಲ ಬಾಕಿ 1 ಲಕ್ಷ ಇದ್ದರೆ ಎಲ್ಲಾ ಆಸ್ತಿ ಜಪ್ತಿಮಾಡಿದರೂ ರೂ. 25,000/–ಸಿಗುವುದು ಕಷ್ಟ) ಹೀಗಿರುವಾಗ ಡಿಕ್ರಿ ಸಾಲಗಳೂ ವಸೂಲಾಗದೆ ವರ್ಷಗಟ್ಟಲೆ ಉಳಿಯುತ್ತವೆ.

## ಸರ್ಕಾರದ ಮಧ್ಯಪ್ರವೇಶ

ಇಷ್ಟಾಗಿದ್ದಾಗ್ಯೂ ಡಿಕ್ರಿ ಸಾಲದ ವಸೂಲಾತಿಯಲ್ಲಿ ಸರ್ಕಾರದ ಮಧ್ಯಪ್ರವೇಶವಿದೆ. ವಸೂಲಿ ಕ್ರಮಕೈಗೊಂಡಾಗ ಸಾಲಗಾರನಿಗೆ 'ತಡೆಯಾಜ್ಞೆ' ನೀಡುವುದರಿಂದ 10–15 ವರ್ಷಗಳು ಸಾಲ ವಸೂಲಾಗದೆ ಹಾಗೇ ಉಳಿಯುತ್ತದೆ. ಕಾರಣ, ಒಂದು ಬಾರಿ 'ತಡೆಯಾಜ್ಞೆ' ನೀಡುವುದರಿಂದ ಅದು ತೀರ್ಮಾನವಾಗುವವರೆಗೂ ಸಾಲದ ಬಾಕಿ ಹಾಗೇ ಉಳಿದು ಬಡ್ಡಿ ಬೆಳೆಯುತ್ತಿರುತ್ತದೆ. ಜೊತೆಗೆ ಸರ್ಕಾರ ಇದ್ದಕ್ಕಿದ್ದಂತೆ ಕೈಗೊಳ್ಳುವ ಅಸಂಬದ್ಧ ತೀರ್ಮಾನಗಳು ಸಹಕಾರಿ ಬ್ಯಾಂಕುಗಳ ಸಾಲ ವಸೂಲಾತಿಯನ್ನು ಗಂಡಾಂತರದಲ್ಲಿ ಸಿಲುಕಿಸುತ್ತವೆ. ಇದರಿಂದಾಗಿ ಸಾಲ ವಾಪಸಾತಿ ಮಾಡುವವರು ಯಾರೂ ಮರುಪಾವತಿ ಮಾಡುವುದಿಲ್ಲ. ಇತ್ತ ಸರ್ಕಾರವೂ ತೀರ್ಮಾನ ಕೈಗೊಳ್ಳದೆ, ಸಾಲಗಾರರು ಹಣ ಕಟ್ಟದೆ ಸುಸ್ತಿ ಬಾಕಿ ಸುಸ್ತಿಯಾಗಿಯೇ ಉಳಿಯುತ್ತದೆ.

## ವಸೂಲಾತಿ ಕ್ರಮ

ಆಡಳಿತ ಮಂಡಳಿ ಸಾಲ ವಸೂಲಾತಿಗೆ ಸಮರ್ಪಕ ಕ್ರಮ ರೂಪಿಸದಿರುವುದು ಒಂದು ತೊಡಕು. ಯಾವಾಗ ಸಾಲಗಾರರಿಗೆ ಸೂಚನೆ ನೀಡಬೇಕು, ದಾವಾ ಹಾಕುವುದು ಯಾವಾಗ, ನ್ಯಾಯಾಲಯದ ವಿಚಾರಗಳು, ಇಂತಹ ಕ್ರಮಗಳಿಗೆ ಸರಿಯಾದ ನೀತಿ–ನಿಯಮಗಳಿಲ್ಲ. ಯಾವುದೇ ಸಹಕಾರಿ ಬ್ಯಾಂಕಿನ ಆಡಳಿತ ವರ್ಗ ಸಾಲ ವಸೂಲಾತಿಯ ರೀತಿಯನ್ನು ರೂಪಿಸದಿದ್ದಲ್ಲಿ ಬಾಕಿ ವಸೂಲಿ ತುಂಬಾ ಕಷ್ಟಕರ.

## ಲೆಕ್ಕ ಪರಿಶೋಧನೆ

ಸಹಕಾರಿ ಬ್ಯಾಂಕುಗಳ ಲೆಕ್ಕ ಪರಿಶೋಧಿಸಲು ಸರ್ಕಾರದಿಂದ ಪರಿಶೋಧಕರ ನೇಮಕವಾಗುತ್ತದೆ. ಇವರಿಗೆ ಸಾಮಾನ್ಯವಾಗಿ ಬ್ಯಾಂಕಿಂಗ್ ಲೆಕ್ಕ ಪರಿಶೋಧನೆಯಲ್ಲಿ ಆಳವಾದ ಅನುಭವ ಕಮ್ಮಿ. ಇದರಿಂದ ಅವರು ಯಾವ ರೀತಿ ಸಲಹೆಗಳನ್ನು ನೀಡುವುದು ? ತುಂಬಾ ಕಟ್ಟು–ನಿಟ್ಟಾದ ಪರಿಶೋಧನೆ ನಡೆಸುವುದು ಹೇಗೆ ? ಇದರಿಂದಾಗುವ ಫಲಿತಾಂಶವೇನು ? ಹಾಗೆಯೇ ಕೆಲವೊಮ್ಮೆ ಅವರು ನೀಡಿದ ಯಾವುದೇ ಉತ್ತಮ ಸಲಹೆಗಳನ್ನು ಆಡಳಿತ ವರ್ಗ ಜಾರಿಗೆ ತರುವುದಿಲ್ಲ. ಹೆಚ್ಚುತ್ತಿರುವ ಬಾಕಿ ಹೆಚ್ಚಳದ ಬಗ್ಗೆ ತಪಾಸಕರ ಗಮನ ಅತ್ಯಗತ್ಯ.

## ರಚನೆಯಲ್ಲಿರುವ ದೋಷ

ಸಹಕಾರಿ ಬ್ಯಾಂಕುಗಳ ರಚನೆಯಲ್ಲಿ ಕೆಲವು ಬದಲಾವಣೆ ಅಗತ್ಯವಿದೆ. 'ಪ್ರಜಾಪ್ರಭುತ್ವ' ಮಾದರಿಯಲ್ಲಿ ನಡೆಯುತ್ತಿರುವ ಈ ಬ್ಯಾಂಕುಗಳಲ್ಲಿ ದುರಾಸಕ್ತಿ ಹೊಂದಿರುವವರು ಭಾಗವಹಿಸುವುದು ಕಂಡು

ಬರುತ್ತದೆ. ಮುಖ್ಯವಾಗಿ ಇಲ್ಲಿ ಗ್ರಾಹಕ ಗ್ರಾಹಕನಾಗಿರದೆ ಷೇರುದಾರನಾಗಿದ್ದು, ಇಲ್ಲಿನ ಕಾರ್ಯಾಚರಣೆ ಇತರ ಬ್ಯಾಂಕುಗಳದಕ್ಕಿಂತ ಭಿನ್ನವಾಗಿದೆ. ಇವುಗಳಿಂದ ಸದಸ್ಯರುಗಳಿಗೆ ಮಾತ್ರ ಸಾಲ ದೊರೆಯುವುದು. ಇದರಿಂದ ಸಹಕಾರಿ ಬ್ಯಾಂಕುಗಳ ದೈನಂದಿನ ಆಡಳಿತದಲ್ಲಿ ದುರಾಸಕ್ತಿ ಇರುವವರ ಪ್ರವೇಶದಿಂದಾಗಿ ಬಾಕಿಯು ಹೆಚ್ಚಳಕ್ಕೆ ಕಾರಣವಾಗಿದೆ.

## ತಜ್ಞ ಹಾಗೂ ನುರಿತ ನೌಕರರ ಸದುಪಯೋಗದ ಅಭಾವ

ಇದರ ಕೊರತೆ ಸಹಕಾರಿ ಬ್ಯಾಂಕುಗಳಲ್ಲಿದೆ. ಬ್ಯಾಂಕುಗಳಲ್ಲಿ ಸಾಲಗಳ ಸಮರ್ಪಕ ನಿರ್ವಹಣೆಗೆ ತಜ್ಞ ಹಾಗೂ ತರಬೇತಿ ಹೊಂದಿದ ನೌಕರರನ್ನು ನೇಮಿಸಿ, ಸದುಪಯೋಗಪಡಿಸಿಕೊಂಡಲ್ಲಿ ಸುಸ್ತಿ ಬಾಕಿಯು ಪರಿಣಾಮ ಸುಧಾರಿಸುತ್ತದೆ. ಆದ್ದರಿಂದ ಸಾಮಾನ್ಯವಾಗಿ ಸಹಕಾರಿ ಬ್ಯಾಂಕುಗಳಲ್ಲಿ ತಜ್ಞ ನೌಕರರನ್ನು ಗುರುತಿಸದಿರುವುದರಿಂದ ಅದು ಸುಸ್ತಿ ಬಾಕಿಯ ಮೇಲೂ ಪರಿಣಾಮ ಬೀರಬಹುದು.

ಸಾಲ ವ್ಯವಸ್ಥೆಯ ಲೋಪ–ದೋಷಗಳಿಗೆ ಬ್ಯಾಂಕಿನ ಸಿಬ್ಬಂದಿ ಕೂಡ ಕಾರಣರು. ಕೆಲವು ಬ್ಯಾಂಕುಗಳಲ್ಲಿ ಸಿಬ್ಬಂದಿಯವರಿಂದ ನೀಡುವ 'ಗ್ರಾಹಕ ಸೇವೆ' ತುಂಬ ಕೆಳಮಟ್ಟದ್ದಾಗಿದೆ. ಬಾಕಿ ಸಾಲ ವಸೂಲಿಗೆ ಸಮಯಕ್ಕೆ ಸರಿಯಾಗಿ ನೋಟೀಸ್ ನೀಡದಿರುವುದು, ವ್ಯಾಜ್ಯ ಅರ್ಜಿ ಹಾಕದಿರುವುದು, ಮುಂತಾದ ಕಾರಣಗಳಿಂದ ಸಾಲ ವಸೂಲಾಗದೆ ಉಳಿಯುತ್ತದೆ. ಆದ್ದರಿಂದ ಆಡಳಿತ ವರ್ಗ ಉತ್ತಮ ನೌಕರ ವರ್ಗವನ್ನು ನೇಮಿಸಿಕೊಳ್ಳುವುದು ಅತ್ಯಗತ್ಯ.

ಬಹುಪಾಲು ಸಹಕಾರಿ ಬ್ಯಾಂಕುಗಳಲ್ಲಿ 'ಗುರಿ' ಸಾಧನೆ ಅಷ್ಟಾಗಿ ಕಂಡುಬರುವುದಿಲ್ಲ. ಸಾಲದ ವಸೂಲಾತಿ ಬಗ್ಗೆ 'ಮುಂಗಡ ಪತ್ರ' ಹೊರಡಿಸಿ, ಆಗಾಗ್ಗೆ ವಸೂಲಾತಿ ಬಗ್ಗೆ ಪರಿಶೀಲನೆ ನಡೆಸುತ್ತಿದ್ದರೆ ವಸೂಲಾತಿ ಉತ್ತಮವಾಗಬಹುದು.

### ಸಾಲದ ಬಾಕಿ

(ಕೋಟಿ ರೂ.ಗಳಲ್ಲಿ)

| ವರ್ಷ | ಅಪೆಕ್ಸ್ ಬ್ಯಾಂಕ್ | ಡಿ.ಸಿ.ಸಿ. ಬ್ಯಾಂಕ್ |
|---|---|---|
| 1980–81 | 7.00 | 67.00 |
| 1981–82 | 8.00 | 64.00 |
| 1982–83 | 8.00 | 66.00 |
| 1983–84 | 6.00 | 93.00 |
| 1984–85 | 12.00 | 92.00 |
| 1985–86 | 4.00 | 100.00 |



### ಜಿಲ್ಲಾವಾರು ಸಾಲದ ಬಾಕಿ ಡಿ.ಸಿ.ಸಿ. ಬ್ಯಾಂಕು

| ಜಿಲ್ಲೆ | | (ಕೋಟಿ ರೂ.ಗಳಲ್ಲಿ) |
|---|---|---|
| 1 | ಬೆಂಗಳೂರು | 5.00 |
| 2 | ಕೋಲಾರ | 2.15 |
| 3 | ಚಿತ್ರದುರ್ಗ | 4.82 |
| 4 | ಶಿವಮೊಗ್ಗ | 5.52 |
| 5 | ತುಮಕೂರು | 3.39 |
| 6 | ಮೈಸೂರು | 4.19 |
| 7 | ಮಂಡ್ಯ | 6.55 |
| 8 | ಹಾಸನ | 3.27 |
| 9 | ಮಂಗಳೂರು | 2.30 |
| 10 | ಕೊಡಗು | 3.31 |
| 11 | ಬೆಳಗಾಂ | 12.10 |
| 12 | ಬಿಜಾಪುರ | 13.35 |
| 13 | ಧಾರವಾಡ | 19.89 |
| 14 | ಉತ್ತರಕನ್ನಡ | 2.36 |
| 15 | ಗುಲ್ಬರ್ಗ | 2.52 |
| 16 | ಬೀದರ್ | 3.76 |
| 17 | ರಾಯಚೂರು | 3,56 |
| 18 | ಬಳ್ಳಾರಿ | 5.35 |
| 19 | ಚಿಕ್ಕಮಗಳೂರು | 3.29 |
| | ಒಟ್ಟು | 106.68 |

## ಆಡಳಿತ ವರ್ಗದಿಂದ ಬಾಕಿ

ಸಹಕಾರಿ ಬ್ಯಾಂಕುಗಳಲ್ಲಿ ಬಾಕಿ ಹೆಚ್ಚಲು ಇದೂ ಒಂದು ಕಾರಣ. ಬ್ಯಾಂಕಿನ ನಿರ್ದೇಶಕರುಗಳೇ ಸಾಲ ಪಡೆದು ಮರುಪಾವತಿ ಮಾಡದಿರುವುದರಿಂದ ಸುಸ್ತಿ ಬಾಕಿ ಹೆಚ್ಚುತ್ತಿದೆ. ಹಿಂದೆ ಸಹಕಾರಿಗಳಿಗೆ ಸೇವಾಮನೋಭಾವವಿತ್ತು. ಆದರೆ ಈಗ ಸ್ವಂತ ಅನುಕೂಲಕ್ಕೋಸ್ಕರ ಚುನಾಯಿತರಾಗಿ ಬರುತ್ತಾರೆ. ಇಂತಹ ಸಾಲಗಳು ವಾಪಸಾಗದಿರುವುದೇ ಹೆಚ್ಚು. ಆದ್ದರಿಂದ ರಿಸರ್ವ್ ಬ್ಯಾಂಕ್ ಆಡಳಿತ ವರ್ಗದವರಿಗೆ ಸಾಲ ಪಡೆಯದಿರುವಂತೆ (ಹಿಂದೆ ಇದ್ದಂತೆ) ಕಾನೂನು ಜಾರಿಗೆ ತಂದರೆ ಇಂತಹ ಸುಸ್ತಿ ಬಾಕಿ ಕಡಿಮೆಯಾಗಬಹುದು.

## ಪರಿಹಾರ ಕಾಣದ ಸ್ಥಿತಿ

ಸಹಕಾರಿ ಬ್ಯಾಂಕುಗಳಲ್ಲಿ ಬಾಕಿ ಹೆಚ್ಚಲು ಮೇಲ್ಕಂಡ ಕಾರಣಗಳ ಜೊತೆಗೆ ಇತರ ಸಣ್ಣ–ಪುಟ್ಟ ಕಾರಣಗಳಿವೆ. ಇಂತಹ ಕಾರಣಗಳಿಂದ ಸಹಕಾರಿ ಬಾಕಿ ಹೆಚ್ಚುತ್ತಿದೆ. ಇದಕ್ಕೆ ಮೂಲಭೂತ ಕಾರಣಗಳಿಂದ ಹಿಡಿದು ನೀತಿ ನಿಯಮಗಳವರೆಗೆ ಬದಲಾವಣೆ ಅಗತ್ಯ. ಕೆಲವು ವಿಷಯಗಳಲ್ಲಿ ಕಾಯಿದೆ ಹಾಗೂ ಕಾನೂನು ಮಾರ್ಪಾಟಾಗಬೇಕು. ಉತ್ತಮ ಆಡಳಿತ ವರ್ಗ, ಹೆಚ್ಚಿನ ವಿದ್ಯಾರ್ಹತೆ ಹಾಗೂ ತರಬೇತಿ ಹೊಂದಿದ ನೌಕರರು ಅಗತ್ಯ. ಆದರೆ ಸೇವಾ ಧ್ಯೇಯ ಹೊಂದಿ ಲಾಭದ ಉದ್ದೇಶವಿಲ್ಲದ ಸಹಕಾರಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ದುಬಾರಿ ವೆಚ್ಚ ಭರಿಸುವುದು ಹೇಗೆ ? ಇದಕ್ಕೆ ಪರಿಹಾರ ಅಗತ್ಯ. ಸಹಕಾರಿ ಬ್ಯಾಂಕುಗಳ ಆದಾಯದ ಬಾಬ್ತು ಏರಿಸಲು ಪ್ರಯತ್ನಿಸಬೇಕು. ಮುಖ್ಯವಾಗಿ ಸುಸ್ತಿ ಬಾಕಿ ವಸೂಲಿಗೆ ಯೋಜನೆಗಳು ಬೇಕಾಗಿವೆ. ಈಗಾಗಲೇ ಮಿತಿಮೀರಿದ ಸುಸ್ತಿ ಬಾಕಿಯಿಂದ ಹಲವಾರು ಸಹಕಾರಿ ಬ್ಯಾಂಕುಗಳ 'ದ್ರವತ್ವ' ಕುಂಠಿತಗೊಂಡಿದೆ. ಸಹಕಾರಿ ಬ್ಯಾಂಕುಗಳು ನಷ್ಟದಲ್ಲಿ ನಡೆಯುತ್ತಿವೆ. ಕೋಟಿಗಟ್ಟಲೆ ಬಾಕಿ ಹಾಗೂ ಬಡ್ಡಿ ಬರಬೇಕಾಗಿದೆ. ಅದರಲ್ಲಿ ಕರಡು ಹೋಗಿ ಬ್ಯಾಂಕಿಗೆ ಬರುವ ಪ್ರಮಾಣ ತಿಳಿಯದು. ಇದು ಸಹಕಾರಿ ಬ್ಯಾಂಕುಗಳ ಪರಿಸ್ಥಿತಿ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸಾರ್ವಜನಿಕರ ಮನದ ಮಿಡಿತವನ್ನು ಮುಟ್ಟುವ ಸಹಕಾರಿ ಬ್ಯಾಂಕಿಂಗ್ ಹೆಚ್ಚುತ್ತಿರುವ ಸಾಲದ ಬಾಕಿಯಿಂದ ಮುಕ್ತವಾಗಬೇಕು. ಇದಕ್ಕೆ ಬೇಕಾಗುವ ಎಲ್ಲ ಅಗತ್ಯ/ಅನಗತ್ಯಗಳನ್ನು ಪರಿಶೀಲಿಸಿ ಸೂಕ್ತ ಕ್ರಮ ಕೈಗೊಂಡರೆ ಬಾಕಿಯ ಹೆಚ್ಚಳ ಸುಧಾರಿಸಿ ಸಹಕಾರಿ ಬ್ಯಾಂಕುಗಳು ಯಶಸ್ವಿಯಾಗಬಹುದು. ★

## ಬೇರೆ ಭಾಷೆ ಆಡೀರಿ, ಜೋಕೆ!

ಮಧ್ಯಪ್ರಾಚ್ಯದ ತೈಲ ರಾಷ್ಟ್ರಗಳಲ್ಲೊಂದಾದ ಕುವೈತಿನ ಸುದ್ದಿಯಿದು : ಖಾರಿ ಪ್ರವೇಶದ ಇತರ ಅರಬ್ ರಾಜ್ಯಗಳಲ್ಲಿರುವಂತೆ ಕುವೈತಿನ ಬ್ಯಾಂಕುಗಳಲ್ಲೂ ಅರಬರಲ್ಲದ, ಏಷ್ಯದಿಂದ ಬಂದ ನೌಕರರು ಹೆಚ್ಚು ಸಂಖ್ಯೆಯಲ್ಲಿದ್ದಾರಂತೆ. ಅವರಲ್ಲಿ ಭಾರತ, ಪಾಕಿಸ್ಥಾನ ಮತ್ತು ಫಿಲಿಪೀನ್ಸಿನಿಂದ ಬಂದವರೇ ಅಧಿಕ. ನೌಕರರಲ್ಲಿ ಕೆಲವರು ತಮ್ಮ ಕೆಲಸದ ಸಂದರ್ಭದಲ್ಲಿ ಉರ್ದು, ಹಿಂದಿ ಮತ್ತು ಇತರ ಭಾಷೆಗಳನ್ನು ಬಳಸುವುದರಿಂದ ಗ್ರಾಹಕರಿಗೆ ಕಿರಿಕಿರಿಯಾಗುವುದಂತೆ. ಆದ್ದರಿಂದ ಅರಬ್ಬಿ ಅಥವಾ ಇಂಗ್ಲಿಷ್ ಭಾಷೆಯಲ್ಲಿ ಮಾತ್ರ ಮಾತಾಡಬೇಕೆಂದು ಅಲ್ಲಿಯ ಬ್ಯಾಂಕುಗಳಲ್ಲೊಂದಾದ ಬರ್ಗನ್ ಬ್ಯಾಂಕಿನ ನೌಕರರಿಗೆ ಆದೇಶ ನೀಡಲಾಗಿದೆ.

ಭಾರತದಲ್ಲಿ ಹಿಂದಿ ಅಲ್ಲದೆ ಬೇರೆ ಭಾಷೆ ಮಾತಾಡಬಾರದೆಂದು ನೌಕರರಿಗಿನ್ನೂ ಸರ್ಕಾರ ಆದೇಶ ಹೊರಡಿಸಿಲ್ಲ! ಕುವೈತಿನ ಆದೇಶವನ್ನು ಸರಿಯಾಗಿ ಅರ್ಥೈಸುವುದಾದರೆ, ಗ್ರಾಹಕರ ಭಾಷೆ ವಿನಾ ಬೇರೆ ಯಾವುದೇ ಭಾಷೆ ಆಡಬಾರದೆಂದು ಸರ್ಕಾರ ಹೇಳಬೇಕಾದೀತು. ಹಾಗೆ ಹೇಳುವುದೆ ?

# ಯಜಮಾನನ ಪರಾರ್ಥಕ ಹೊಣೆ

**ಠೇವಣಿ ಸ್ವೀಕರಿಸುವ ಅಧಿಕಾರ ಹೊಂದಿದ ವ್ಯಕ್ತಿಗೆ ಠೇವಣಿದಾರ ತನ್ನ ಮನೆಬಾಗಿಲಿನಲ್ಲೇ ಠೇವಣಿ ನೀಡಿದ ಮಾತ್ರಕ್ಕೆ ಆ ಅಧಿಕಾರಿ ಠೇವಣಿದಾರನ ಅಭಿಕರ್ತನಾಗುವುದಿಲ್ಲ. ಠೇವಣಿ ಮಾಡಿದ್ದಕ್ಕೆ ಪಾಸ್ ಪುಸ್ತಕದಲ್ಲಿ ನಮೂದುಗಳಿದ್ದರೂ ಕಛೇರಿಯ ಇತರ ಪುಸ್ತಕಗಳಲ್ಲಿ ನಮೂದುಗಳಿಲ್ಲವೆಂಬ ಕಾರಣದಿಂದ ಠೇವಣಿ ಮಾಡಿಯೇ ಇಲ್ಲವೆಂಬ ವಾದ ಸರಿಯಲ್ಲ.**

**ಭಾರತ ಒಕ್ಕೂಟ**
**ಮತ್ತು**
**ಮೇರಿ ಕುಟ್ಟಿ ವಾರ್ಕೆ**
**ಇವರ ನಡುವೆ**


## ರಾಜಾರಾಮ ಹೆಗಡೆ

**ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು**


ಮೇರಿ ಕುಟ್ಟಿ ವಾರ್ಕೆ ಎನ್ನುವವರು ತಾ 1980ರ ಏಪ್ರಿಲ್ 1ರಂದು, ರೂ 5ರ ಮೊದಲ ಠೇವಣಿಯೊಂದಿಗೆ, ಅಲೆಪ್ಪೆಯ ಕೈನಾಕರಿ ಅಂಚೆ ಕಛೇರಿ (ಪೂರ್ವ)ದಲ್ಲಿ ಅಂಚೆ ಕಛೇರಿ ಉಳಿತಾಯ ಖಾತೆಯೊಂದನ್ನು ತೆರೆದರು. ಕ್ರಮಬದ್ಧವಾಗಿಯೇ ಸಹಿ ಮತ್ತು ಮೊಹರು ಮಾಡಲ್ಪಟ್ಟ ಪಾಸ್ ಪುಸ್ತಕವನ್ನು ಅವರಿಗೆ ಕೊಡಲಾಯಿತು. ತದನಂತರ ಆಕೆ ತಾ. 3–4–1980ರಂದು ರೂ. 1,000, ತಾ. 18–6–1980ರಂದು ರೂ. 45,000, ತಾ. 2–7–1980ರಂದು ರೂ. 2,400, ತಾ. 23–7–1980ರಂದು ರೂ. 2,900 ಮತ್ತು ತಾ. 14–2–1981ರಂದು ರೂ. 1,000 ಠೇವಣಿ ಮಾಡಿದರು. ಇವೆಲ್ಲವುಗಳನ್ನು ಜಮಾ ತೆಗೆದುಕೊಂಡ ಬಗ್ಗೆ ನಮೂದಿಸಿ, ಪಾಸ್ ಪುಸ್ತಕವನ್ನು ಆಕೆಗೆ ಕೊಡಲಾಯಿತು.

ಆಕೆ ಸ್ವಲ್ಪ ಹಣವನ್ನು ವಾಪಸು ಪಡೆಯುವದಕೋಸ್ಕರ ತಾ. 30–7–81ರಂದು ಅಂಚೆ ಕಛೇರಿಗೆ ಬಂದಾಗ, ಹಣ ಪ್ರಧಾನ ಕಛೇರಿಯಿಂದ ಬರಬೇಕಾಗಿದೆ ಎಂದು ಹೇಳಿ, ಆಕೆಗೆ ಮಾರನೆಯ ದಿನ ಬರಲು ತಿಳಿಸಲಾಯಿತು. ಮಾರನೆಯ ದಿನ ಆಕೆ ಅಂಚೆ ಕಛೇರಿಗೆ ಬಂದಾಗ, ಇನ್ನೊಬ್ಬ ಠೇವಣಿದಾರನ ದೂರಿನ ಆಧಾರದ ಮೇಲೆ ಕೈನಾಕರಿ ಅಂಚೆ ಕಛೇರಿಯ (ಸಂಚಾರಿ) ಹೆಚ್ಚುವರಿ ಇಲಾಖಾ ಶಾಖೆಯ ಪೋಸ್ಟ್ ಮಾಸ್ಟರ್ ಆದ ವಿ.ಎ. ಜೋಸೆಫ್‌ರನ್ನು (ನಾಲ್ಕನೆಯ ಪ್ರತಿವಾದಿ) ಬಂಧಿಸಲಾದ ವಿಷಯ ಆಕೆಗೆ ತಿಳಿಯಿತು. ಮತ್ತೆ ಆಕೆ ಆಗಸ್ಟ ಮೊದಲ ವಾರದಲ್ಲಿ ಅಲೆಪ್ಪಿಯ ಅಂಚೆ ಕಛೇರಿಯ ಸುಪರಿಂಟೆಂಡೆಂಟ್ (ಮೂರನೆಯ ಪ್ರತಿವಾದಿ) ಅವರನ್ನು ಹಣ ವಾಪಸು ಪಡೆಯುವದಕ್ಕೆ ಭೇಟಿ ಮಾಡಿದಾಗ, ಪಾಸ್ ಪುಸ್ತಕವನ್ನು (ಮೂಲ) ಕೊಡಬೇಕೆಂದು ಹೇಳಲಾಯಿತು. ಕೂಡಲೇ ಆಕೆ, ಅಲೆಪ್ಪಿಯ ಜೋಸ್ ಸ್ಟುಡಿಯೋದಲ್ಲಿ ಫೋಟೋಸ್ಟಾಟ್ ಪ್ರತಿಗಳನ್ನು ಮಾಡಿಸಿ, ಮೂಲ ಪಾಸ್ ಪುಸ್ತಕವನ್ನು ಸುಪರಿಂಟೆಂಡೆಂಟ್ ಅವರಿಗೆ ನೀಡಿ, ಸ್ವೀಕೃತಿ (ರಶೀತಿಯನ್ನು) ಪಡೆದಳು. ಇದರ ಅನಂತರವೂ ಹಣ ನೀಡದಾದಾಗ, ಆಕೆ ತ್ರಿವೇಂಡ್ರಮ್‌ನ ಪೋಸ್ಟ್ ಮಾಸ್ಟರ್ ಜನರಲ್ ಅವರನ್ನು (2ನೆಯ ಪ್ರತಿವಾದಿ) ಭೇಟಿಮಾಡಿ, ಹಣ ಕೊಡುವಂತೆ ಕೇಳಿ ನಿವೇದನೆ ಪತ್ರವನ್ನೂ ನೀಡಿದಳು. ಇವೆಲ್ಲ ಪ್ರಯತ್ನಗಳು ನಿಷ್ಫಲವಾದಾಗ, ಪಾಸ್ ಪುಸ್ತಕ ಮತ್ತು ರಶೀತಿಯ ಫೋಟೋಸ್ಟಾಟ್ ಪ್ರತಿಗಳೊಂದಿಗೆ ಕೇರಳದ ಮುಖ್ಯಮಂತ್ರಿಗಳಲ್ಲಿಯೂ ಕೇಂದ್ರ ಸಂಪರ್ಕ ಖಾತೆ ಸಚಿವರಲ್ಲಿಯೂ ಆಕೆ ಮನವಿ ಸಲ್ಲಿಸಿದರು.

ಮತ್ತೊಮ್ಮೆ ಆಕೆ ನಾಲ್ಕನೆಯ ಪ್ರತಿವಾದಿಯನ್ನು ಭೇಟಿ ಮಾಡಿದಾಗ, ರಶೀತಿಯ ಮೇಲೆ ಸಹಿಯನ್ನು ಮಾಡುವಂತೆಯೂ, ಪಾಸ್ ಪುಸ್ತಕವನ್ನು ಮರಳಿ ಪಡೆಯುವಂತೆಯೂ ತಿಳಿಸಲಾಯಿತು. ಜೊತೆಗೆ ಕಾಗದದ ಮೇಲೆ ರೂ. 5 ಎಂದು ಬರೆಯುವಂತೆಯೂ ಸಹಿ ಮಾಡುವಂತೆಯೂ ನಾಲ್ಕನೆಯ ಪ್ರತಿವಾದಿ ಆಕೆಗೆ ತಿಳಿಸಿದರು, ಅದರಂತೆ ಆಕೆ ಬರೆದು, ರಶೀತಿಯನ್ನು ನೀಡಿದರು. ಅದನ್ನು ಪಡೆದ ಕೂಡಲೇ ನಾಲ್ಕನೆಯ ಪ್ರತಿವಾದಿಯು ಖಾತೆಯಲ್ಲಿ ಕೇವಲ ರೂ. 5/– ನಮೂದಿಸಲ್ಪಟ್ಟ ದ್ವಿಪ್ರತಿ (Duplicate) ಪಾಸ್ ಪುಸ್ತಕವನ್ನು ಆಕೆಗೆ ನೀಡಿದರು. ಅದನ್ನು ನೋಡಿದ ಆಕೆ ರಸೀತಿಯನ್ನು ಮತ್ತು ದ್ವಿಪ್ರತಿ ಪಾಸ್ ಪುಸ್ತಕವನ್ನು ವಾಪಸು ಪಡೆದು ಮೂಲ ಪಾಸ್ ಪುಸ್ತಕವನ್ನು ಕೊಡುವಂತೆ ಕೇಳಿದ ಮನವಿಯನ್ನು ತಿರಸ್ಕರಿಸಿದರು. ಈ ಎಲ್ಲ ಪ್ರಯತ್ನಗಳೂ ವಿಫಲವಾಗಿ, ಆಕೆ ನ್ಯಾಯವಾದಿಯೊಬ್ಬರ ಮೂಲಕ ನೋಟೀಸ್ ನೀಡಿ, ವ್ಯಾಜ್ಯವನ್ನು ಹೂಡಿದರು.

ಪ್ರತಿವಾದಿಗಳು (1ರಿಂದ 3) ಹೊಣೆಯನ್ನು ನಿರಾಕರಿಸಿ, ಜಂಟಿ ಪ್ರತಿವಾದ ಪತ್ರವನ್ನು ಸಲ್ಲಿಸಿ ಈ ರೀತಿ ತಿಳಿಸಿದರು :

ಕೈನಾಕರಿ ಅಂಚೆ ಕಛೇರಿ (ಪೂರ್ವ) (ಸಂಚಾರಿ) ಶಾಖಾ ಪೋಸ್ಟ್ ಮಾಸ್ಟರ್ ಆದ ಪಿ. ಎ. ಜೋಸೆಫ್ 28–9–79ರಿಂದ 14–2–87ರ ಅವಧಿಯಲ್ಲಿ, ಠೇವಣಿಗಾಗಿ ನೀಡಲ್ಪಟ್ಟ ಉಳಿತಾಯ ಖಾತೆಗಳಿಗೆ ಸಂಬಂಧಿಸಿದ ರೂ. 74,304 ರಷ್ಟು ಹಣದ ಅಪರಾತಪರಾ (embezzlement) ಮಾಡಿದ್ದಾರೆಂದು ತಿಳಿಸಲಾಯಿತು. ಇದರ ಜೊತೆಗೆ, ಮೇರಿ ಕುಟ್ಟಿಯು (ವಾದಿ) ಕೇವಲ ರೂ. 5 ರೊಂದಿಗೆ ಖಾತೆಯನ್ನು ತೆರೆದಿದ್ದಾರೆಂದೂ, ತದನಂತರದ ಠೇವಣಿ ಮಾಡಿದ್ದೆನ್ನಲಾದ ಸುಮಾರು ರೂ. 25,300ರ ಬಗ್ಗೆ ಸಂಬಂಧಿಸಿದ ಪುಸ್ತಕಗಳಲ್ಲಿ (Register) ದಾಖಲಾಗಿಲ್ಲ. ಆದುದರಿಂದ ರೂ. 5ರ ಹೊರತಾಗಿ ಯಾವದೇ ಠೇವಣಿಯನ್ನು ವಾದಿ ಮಾಡಿರಲಾರೆಂದು, ಅಥವಾ ಜೋಸಫ್ ಅವರು ಸಂಬಂಧಿಸಿದ ಖಾತೆಗಳಲ್ಲಿ ನಮೂದಿಸಿರಲಾರರೆಂದು ತಿಳಿಸಲಾಯಿತು. ಜೊತೆಗೆ, ವಾದಿಯು ಠೇವಣಿ ಮಾಡಿರಬಹುದೆನ್ನಲಾದ ಹಣವನ್ನು ಆಕೆ ಅಂಚೆ ಕಛೇರಿಯ ನಿಯಮಗಳನ್ನು ಉಲ್ಲಂಘಿಸಿ, ಅಂಚೆ ಕಛೇರಿಯ ಮುಂಗಟ್ಟೆಯಲ್ಲಿ ಕೊಡುವ ಬದಲು, ಆಕೆಯ ಮನೆಯಲ್ಲೇ ಕೊಟ್ಟಿರಬಹುದಾದ್ದರಿಂದ, ಈ ವಂಚನೆಯ ಪ್ರಕರಣದಲ್ಲಿ ಪಾಲ್ಗೊಂಡ ಕಾರಣಕ್ಕಾಗಿ, ಹಣವನ್ನು ಮರಳಿ ಪಡೆಯಲು ಆಕೆಗೆ ಹಕ್ಕಿಲ್ಲ ಎಂದೂ ವಾದಿಸಲಾಯಿತು.

ವಾದ, ಪ್ರತಿವಾದಗಳನ್ನು ಕೇಳಿ, ಕೆಳ ನ್ಯಾಯಾಲಯವು ವಾದಿಯು ಠೇವಣಿ ಮಾಡಿದುದು ನಿಜವೆಂದು ಹೇಳಿ, ಶೇಕಡ 12ರ ಬಡ್ಡಿಯೊಂದಿಗೆ, ರೂ. 57,305ಕ್ಕೆ ಡಿಕ್ರಿಯನ್ನು ನೀಡಿತು. ಈ ತೀರ್ಪಿನ ವಿರುದ್ಧ ಕೇರಳ ಶ್ರೇಷ್ಠ ನ್ಯಾಯಾಲಯಕ್ಕೆ ಅಪೀಲನ್ನು ಸಲ್ಲಿಸಲಾಯಿತು.

ಅಪೀಲಿನಲ್ಲಿ ಅತ್ಯಂತ ಮಹತ್ವದ ಈ ಕೆಳಗಿನ ಅಂಶಗಳನ್ನು ಎತ್ತಲಾಯಿತು :

1 ವಾದಿಯು ಕೇವಲ ರೂ. 5ನ್ನು ಠೇವಣಿ ಮಾಡಿದ್ದು, ಅನಂತರ ಯಾವದೇ ಠೇವಣಿ

ಯನ್ನೂ ಮಾಡಿಲ್ಲವೆಂದೂ, ಅಂಚೆ ಇಲಾಖೆಗೆ ಮತ್ತು ಸರ್ಕಾರಕ್ಕೆ ಹಾನಿ ಮಾಡುವ ಉದ್ದೇಶದಿಂದ ಸುಳ್ಳು ನಮೂದುಗಳನ್ನು ಪಾಸ್‌ಪುಸ್ತಕದಲ್ಲಿ ಸೃಷ್ಟಿಸಲಾಯಿತೆಂದೂ ತಿಳಿಸಲಾಯಿತು.

2 ಅಂಚೆ ಕಛೇರಿಯ ನಿಯಮಗಳನ್ನು ಉಲ್ಲಂಘಿಸಿ, ಹಣವನ್ನು ಮುಂಗಟ್ಟೆಯಲ್ಲಿ ನೀಡಿರದಿರಬಹುದಾದ್ದರಿಂದ,

ಎ) ಪೋಸ್ಟ್ ಮಾಸ್ಟರ್ ನಿಯೋಜನೆಯ ಕ್ರಮದಲ್ಲಿ ಕಾರ್ಯ ನಿರ್ವಹಿಸಿದ್ದಾನೆ ಎಂದು ಪರ್ಯಾಲೋಚಿಸಲಾಗದು, ಮತ್ತು

ಬಿ) ಪೋಸ್ಟ್ ಮಾಸ್ಟರ್ ವಾದಿಯ ಹಣವನ್ನು ಠೇವಣಿಗಾಗಿ ಸ್ವೀಕರಿಸುವುದಕ್ಕೆ ಕೇವಲ ಅಭಿಕರ್ತನಾಗಿ ಕಾರ್ಯ ನಿರ್ವಹಿಸಿದ್ದಾನೆ. ಆದುದರಿಂದ, ಮೇಲ್ಮನವಿದಾರರು ಹಣಕ್ಕೆ ಹೊಣೆಗಾರರಲ್ಲ.

ಉಚ್ಚನ್ಯಾಯಾಲಯ ಅಪೀಲನ್ನು ವಜಾ ಮಾಡುತ್ತಾ ಮೇಲ್ಕಂಡ ಅಂಶಗಳ ಬಗ್ಗೆ ಈ ರೀತಿ ತಿಳಿಸಿತು :

1 ವಿವಿಧ ಠೇವಣಿಗಳನ್ನು ಮಾಡಿದ ಬಗ್ಗೆ ಪಾಸ್ ಪುಸ್ತಕದಲ್ಲಿ ನಮೂದಿಸಿರುವುದನ್ನು ಯಾರೂ ವಿವಾದ ಮಾಡಿಲ್ಲ. ಆದಕಾರಣ ನಮೂದುಗಳು ಸುಳ್ಳೆಂದು ತೋರಿಸುವ ಹೊಣೆ ಪ್ರತಿವಾದಿಗಳದಾಗಿರುತ್ತದೆ. ಆ ನಮೂದುಗಳೆಲ್ಲ ಸುಳ್ಳೆಂದು ಹೇಳುವ ಯಾವದೇ ಪುರಾವೆಯೂ ಈ ವ್ಯಾಜ್ಯದಲ್ಲಿ ಕಂಡುಬಂದಿಲ್ಲ. ಇದಕ್ಕೆ ಹೊರತಾಗಿ, ಕೈನಾಕರಿಯ ಧನಲಕ್ಷ್ಮೀ ಬ್ಯಾಂಕು, ಚಿನ್ನಮಹಾರಿ ಮತ್ತು ಕೈನಾಕರಿಯ ಸಹಕಾರಿ ಬ್ಯಾಂಕುಗಳ ಠೇವಣಿಗಳಿಂದ ಹಣ ಪಡೆದ ಬಗ್ಗೆ ಮತ್ತು ಚೆಂಗನಾಚೇರಿಯಲ್ಲಿ ಮಾರಲಾದ ತನ್ನ ಆಸ್ತಿಯ ಹಣ ಇತ್ಯಾದಿಗಳ ಬಗ್ಗೆ ಸ್ಪಷ್ಟವಾದ ಪುರಾವೆಯನ್ನು ವಾದಿ ಹಾಜರು ಪಡಿಸಿದ್ದಾರೆ.

ಆದುದರಿಂದ ಕೇವಲ ಅಂಚೆ ಕಛೇರಿಯ ಇತರ ಪುಸ್ತಕಗಳಲ್ಲಿ ನಮೂದುಗಳಿಲ್ಲ ಎನ್ನುವ ಕಾರಣಕ್ಕಾಗಿ ವಾದಿ ಇತರ ಠೇವಣಿಗಳನ್ನು ನೀಡಿಲ್ಲ ಎಂಬ ನಿರ್ಧಾರಕ್ಕೆ ಬರಲಾಗದು. ಇದು, ಶಾಖಾ ವ್ಯವಸ್ಥಾಪಕರಾದ ಜೋಸೆಫ್ ಅಂಚೆ ಇಲಾಖೆಗೆ ಮೋಸ ಮಾಡುವ ಉದ್ದೇಶದಿಂದಲೇ ಇತರ ಪುಸ್ತಕಗಳಲ್ಲಿ ನಮೂದಿಸಿಲ್ಲ ಎಂಬುದನ್ನು ಸೂಚಿಸುತ್ತದೆ.

2 ಮುಂದಿನ ಅಂಶಕ್ಕೆ ಉತ್ತರಿಸುತ್ತ, ಪೋಸ್ಟ್ ಮಾಸ್ಟರ್ ಠೇವಣಿಗಳನ್ನು ಸ್ವೀಕರಿಸುವದಕ್ಕೆ ಅಧಿಕಾರ ಹೊಂದಿದ್ದರಿಂದ, ಆತ ನಿಯೋಜನೆಯ ಕ್ರಮದಲ್ಲಿಯೇ ವರ್ತಿಸಿದ್ದಾನೆ (acted in the course of employment), ಕಾನೂನಿನ ಪ್ರಕಾರ, ನೌಕರರ ನಿಯೋಜನೆಯ ಕ್ರಮದಲ್ಲಾದ ಎಲ್ಲ ಕಾರ್ಯಗಳಿಗೂ ಯಜಮಾನನು ಪರಾರ್ಥಕವಾಗಿ (vicariously) ಹೊಣೆಗಾರನಾಗಿರುತ್ತಾನೆ (liable). ಯಜಮಾನನ ಪರಾರ್ಥಕ ಹೊಣೆಯು (vicarious liability), ವಿಧಿಬದ್ಧ ಅಥವಾ ವಿಧಿವಿರುದ್ಧವಾಗಿರುವ ಕಾರ್ಯಗಳ ಸ್ವರೂಪದ ಆಧಾರಿತವಾಗಿರದು. ಅಂಥ ಕಾರ್ಯದಲ್ಲಿ, ಒಂದು ವೇಳೆ ಯಾವುದೇ ಕಾನೂನು/ನಿಯಮಗಳ ಉಲ್ಲಂಘನೆಯಾಗಿದ್ದರೂ ಕೂಡ, ಅದು ನೌಕರರ ನಿಯೋಜನೆಯ ಕ್ರಮದಲ್ಲಾದ ಕಾರ್ಯವಾಗಿದ್ದರೆ, ಯಜಮಾನನು ಪರಾರ್ಥಕವಾಗಿ ಹೊಣೆಗಾರನಾಗಿರುತ್ತಾನೆ.

ನಾಲ್ಕನೆಯ ಪ್ರತಿವಾದಿಯೇ ಠೇವಣಿಗಳನ್ನು ಸ್ವೀಕರಿಸುವ ಅಧಿಕಾರ ಹೊಂದಿದ ವ್ಯಕ್ತಿಯಾದ್ದರಿಂದ, ಮನೆ ಬಾಗಿಲಿನಲ್ಲಿ ಠೇವಣಿ ನೀಡಿದ ಮಾತ್ರಕ್ಕೆ, ವಾದಿಯ ಅಭಿಕರ್ತನಾಗುತ್ತಾನೆ ಎಂಬ ತೀರ್ಮಾನಕ್ಕೆ ಬರಲಾಗದು.

ಈ ಎಲ್ಲ ಕಾರಣಗಳಿಂದಾಗಿ ನ್ಯಾಯಾಲಯ ಅಪೀಲುದಾರರಿಂದ ಉದಾಹರಿಸಲ್ಪಟ್ಟ ಭಾರತೀಯ ಸ್ಟೇಟ್ ಬ್ಯಾಂಕ್ ವಿರುದ್ಧ ಶ್ಯಾಮಾದೇವಿ ಪ್ರಕರಣದ ವ್ಯತ್ಯಾಸವನ್ನು ತೋರಿಸುತ್ತ, ಅಂಚೆ ಇಲಾಖೆ ವಾದಿಯ ಹಣಕ್ಕೆ ಹೊಣೆಯೆಂದು ತಿಳಿಸಿ, ಅಪೀಲನ್ನು ತಳ್ಳಿಹಾಕಿತು. ★



# ಉದ್ಯಮಶೀಲ ಮಹಿಳೆಯರಿಗೆ ಬ್ಯಾಂಕ್ ನೆರವು

**ಇಂದಿನ ಪರಿಸ್ಥಿತಿಯಲ್ಲಿ ಮಹಿಳೆಯರ ಆರ್ಥಿಕ ಸ್ವಾವಲಂಬನೆ ಅತ್ಯಗತ್ಯ. ಅವರು ನಿರುದ್ಯೋಗಿಗಳಾಗದೆ ಸ್ವಂತ ಉದ್ಯಮಗಳನ್ನಾದರೂ ಸ್ಥಾಪಿಸಿ ತಮ್ಮ ಕಾಲ ಮೇಲೆ ತಾವು ನಿಲ್ಲುವಂತಾಗಬೇಕು. ಇದಕ್ಕೆ ಸರ್ಕಾರದ, ಸಮಾಜದ ನೆರವು ಅತ್ಯಗತ್ಯ. ಈ ನಿಟ್ಟಿನಲ್ಲಿ ಬ್ಯಾಂಕಿನ ಹೊಣೆಯೇನು?**

**ವೈ. ಎಸ್. ಉಷಾ**

**ಭಾರತೀಯ ಸ್ಟೇಟ್ ಬ್ಯಾಂಕ್**
**ರೇಸ್ ಕೋರ್ಸ್ ರಸ್ತೆ ಶಾಖೆ, ಬೆಂಗಳೂರು**

ಇತ್ತೀಚಿನ ವರದಿಯೊಂದರ ಪ್ರಕಾರ ಪ್ರಪಂಚದಲ್ಲಿ ಮಹಿಳೆಯರ ಸಂಖ್ಯೆ ಗಣನೀಯವಾಗಿ ಇಳಿಯುತ್ತಿದೆ. ಎಪ್ಪತ್ತರ ದಶಕದಿಂದೀಚೆಗೆ ಕಡಿಮೆಯಾಗುತ್ತಿರುವ ಮಹಿಳೆಯರ ಸಂಖ್ಯೆ ಕ್ರಿ.ಶ. 2000ದ ವೇಳೆಗೆ ಎರಡು ಕೋಟಿಯಷ್ಟು ಕಡಿಮೆಯಾಗುವ ಸಂಭವವಿದೆಯಂತೆ. ಈ ಸ್ಥಿತಿಗೆ ಕಾರಣ ಆ ವರದಿಯಲ್ಲೇ ಸೂಚಿಸಿರುವ ಕಾರಣಗಳು ಹಲವಾರು. ಅದರಲ್ಲಿ ತುಂಬಾ ಮುಖ್ಯವಾದದ್ದೆಂದರೆ ಇಂದಿನ ಮಹಿಳೆಯರ ದುಸ್ಥಿತಿ ಅದರಲ್ಲೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ನಡೆಯುತ್ತಿರುವ ಮಹಿಳೆಯರ ಮೇಲಿನ ನಿರಂತರ ಶೋಷಣೆ. ಹಿಂದುಳಿದ ರಾಷ್ಟ್ರಗಳ ಮಹಿಳೆಯರಲ್ಲಿ ಪುರುಷರ ಮೇಲಿನ ಅವಲಂಬನೆ ಹೆಚ್ಚು. ಆದ್ದರಿಂದ ಆರ್ಥಿಕ ಸಂಕಷ್ಟಗಳೂ ಸಾಮಾಜಿಕ ಕಟ್ಟುಪಾಡುಗಳು ಅವರಿಗೇ ಹೆಚ್ಚು. ಮಹಿಳೆಯರ ಈ ದುಸ್ಥಿತಿ ನಿರ್ಮೂಲವಾಗಬೇಕಾದರೆ ಅವರು ಆರ್ಥಿಕವಾಗಿ ಸ್ವಾವಲಂಬಿಗಳಾಗುವುದು ಅಗತ್ಯ. ಇದರಿಂದ ಅವರ ಆತ್ಮವಿಶ್ವಾಸ ಹೆಚ್ಚುವುದಲ್ಲದೆ, ಸಾಮಾಜಿಕವಾಗಿಯೂ ಹೋರಾಡಲು ಧೈರ್ಯ ಬರುತ್ತದೆ. ಈ ಅಗತ್ಯವನ್ನು ಮನಗಂಡೇ ನಮ್ಮ ದೇಶದಲ್ಲಿ ಮಹಿಳೆಯರು ಹೆಚ್ಚು ಸ್ವಾವಲಂಬಿಗಳಾಗುವುದನ್ನು ಪ್ರೋತ್ಸಾಹಿಸಲಾಗುತ್ತಿದೆ. ಅದಕ್ಕಾಗಿ ವಿಶೇಷ ಸೌಲಭ್ಯಗಳನ್ನೂ ರಿಯಾಯಿತಿಗಳನ್ನೂ ತೋರಿಸಲಾಗುತ್ತಿದೆ. ಬ್ಯಾಂಕು ಇಂದಿನ ದಿನಗಳಲ್ಲಿ ಜನಸಾಮಾನ್ಯರಿಗೆ ತುಂಬಾ ಹತ್ತಿರವಾದ ಸೇವಾಸಂಸ್ಥೆ. ಅಂತೆಯೇ ಬ್ಯಾಂಕು ಮತ್ತಿತರ ಹಣಕಾಸು ಸಂಸ್ಥೆಗಳಿಂದ ನೆರವು ಯೋಜನೆಗಳು ಹೆಚ್ಚಾಗಿವೆ. ಸರ್ಕಾರಿ ಇಲಾಖೆಗಳ ಯೋಜನೆಗಳೂ ಇದ್ದರೂ ಅವುಗಳ ಸಂಖ್ಯೆ ಕಡಿಮೆ. ಆದ್ದರಿಂದ ಬ್ಯಾಂಕು ಮತ್ತು ಇತರ ಹಣಕಾಸು ಸಂಸ್ಥೆಗಳಿಂದ ಉದ್ಯಮಶೀಲ ಮಹಿಳೆಯರಿಗೆ ನಗರ ಪ್ರದೇಶದಲ್ಲಿ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ದೊರೆಯಬಹುದಾದ ಹಣಕಾಸಿನ ನೆರವಿನ ಪರಿಚಯ ಈ ಲೇಖನದ ಉದ್ದೇಶ.

## ನಗರ ಪ್ರದೇಶದ ಮಹಿಳೆಯರಿಗೆ

ನಗರ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಬ್ಯಾಂಕುಗಳಿಂದ 'ಮಹಿಳೆಯರಿಗಾಗಿಯೇ' ಎಂದು ಯಾವುದೇ

ಯೋಜನೆಗಳಿಲ್ಲ. ಅಂದರೆ ಬ್ಯಾಂಕುಗಳು ಉದ್ಯಮಶೀಲರಾದಂಥ ಮಹಿಳೆ ಹಾಗೂ ಪುರುಷರಿಬ್ಬರಿಗೂ ಸಮಾನವಾದಂಥ ನೆರವನ್ನು ನೀಡುತ್ತಿವೆ. ಈ ನೆರವು ಸಾಧಾರಣವಾಗಿ ಮೂರು ಹಂತಗಳಲ್ಲಿರುತ್ತದೆ. ಅವೆಂದರೆ :

1 ಉದ್ದಿಮೆ ಸ್ಥಾಪಿಸುವ ಪೂರ್ವದಲ್ಲಿ, ಉದ್ಯಮಶೀಲತೆಯನ್ನು ಗುರುತಿಸುವ, ಹಾಗೂ ಅದನ್ನು ಅಭಿವೃದ್ಧಿಪಡಿಸುವ ತರಬೇತಿ ಯೋಜನೆಗಳು.

2 ಉದ್ದಿಮೆ ಸ್ಥಾಪಿಸಬಯಸುವವರಿಗೆ ಹಣಕಾಸಿನ ನೆರವು ಹಾಗೂ ಎಲ್ಲ ಬಗೆಯ ಮಾರ್ಗದರ್ಶನ.

3 ಉದ್ದಿಮೆ ಸ್ಥಾಪಿಸಿದ ಅನಂತರ ಬ್ಯಾಂಕುಗಳಿಂದ ನಿರಂತರವಾಗಿ ದೊರೆಯುವ ತಾಂತ್ರಿಕ ಸಲಹೆ ಹಾಗೂ ಸೂಚನೆಗಳು ಮತ್ತು ವ್ಯವಸ್ಥಾಪನೆ ಹಾಗೂ ಅಭಿವೃದ್ಧಿ ತರಬೇತಿ ಕಾರ್ಯಕ್ರಮಗಳು.

## ತರಬೇತಿ ಹಾಗೂ ಮಾರ್ಗದರ್ಶನ

ಮೊದಲ ಹಂತದಲ್ಲಿ ಬ್ಯಾಂಕುಗಳು ಉದ್ಯಮಶೀಲತೆಯನ್ನು ಗುರುತಿಸುವ ಹಾಗೂ ಅಭಿವೃದ್ಧಿಪಡಿಸುವ, ಅಭಿರುಚಿಗೆ ತಕ್ಕಂಥ ಉದ್ದಿಮೆಯನ್ನು ಆಯ್ಕೆಮಾಡಿಕೊಳ್ಳುವ ಕಾರ್ಯಕ್ರಮ ಹೊಂದಿರುತ್ತವೆ. ಅನಂತರ ಉದ್ದಿಮೆ ಸ್ಥಾಪಿಸಬಯಸುವವರಿಗೆ ಇಲ್ಲವೆ ಸ್ಥಾಪಿಸಲು ಅಭಿರುಚಿ ಇರುವವರಿಗೆ ಬೇಕಾದ ಎಲ್ಲ ಬಗೆಯ ಮಾರ್ಗದರ್ಶನಗಳು ಬ್ಯಾಂಕುಗಳಿಂದ ದೊರೆಯುತ್ತವೆ. ಈ ಬಗೆಯ ಕಾರ್ಯಕ್ರಮಗಳನ್ನು ಸಾಧಾರಣವಾಗಿ ಜಂಟಿಯಾಗಿ ನಡೆಸಲಾಗುತ್ತದೆ. ಇವುಗಳಲ್ಲಿ ಮೊದಲಿಗೆ ಹಣಕಾಸು ನೆರವು ನೀಡುವ ಎಲ್ಲ ಸಂಸ್ಥೆಗಳ ಬಗ್ಗೆ ಮಾಹಿತಿ, ವಿವಿಧ ಉದ್ದಿಮೆಗಳ ಸ್ಥಾಪನೆ ಬಗ್ಗೆ ಮಾಹಿತಿ, ಅವುಗಳ ತಯಾರಿಕಾ ವಿಧಾನದಿಂದ ಹಿಡಿದು ಅವುಗಳ ಪೊಟ್ಟಣ ಸಿದ್ಧಪಡಿಸುವವರೆಗೆ, ಮಾರಾಟಗಾರಿಕೆ ತತ್ವ, ಮಾರುಕಟ್ಟೆ ಅಧ್ಯಯನ, ಅದರ ಮಹತ್ವ, ಪರಿಯೋಜನಾ ವರದಿ ತಯಾರಿಕೆ, ಉತ್ಪಾದನ ತಂತ್ರ, ದುಡಿಯುವ ಬಂಡವಾಳ, ಸ್ಥಿರಾಸ್ತಿಗಳಿಗಾಗಿ ಸಾಲ, ಉದ್ದಿಮೆಯ ಲೆಕ್ಕಪತ್ರ ಇಡುವಿಕೆ ಹಾಗೂ ಪುಸ್ತಕಗಳ ಮಾದರಿ ಮಾರಾಟಕರ, ತೆರಿಗೆ ಮುಂತಾದವುಗಳ ಬಗ್ಗೆ ತಿಳಿವಳಿಕೆ, ಸಣ್ಣ ಉದ್ದಿಮೆಗಳ ಸಮಸ್ಯೆ ಇವೆಲ್ಲದರ ಬಗ್ಗೆಯೂ ಯುಕ್ತ ತಿಳಿವಳಿಕೆ ನೀಡಲಾಗುತ್ತದೆ. ಇದರಿಂದ ಅಭ್ಯರ್ಥಿಗಳಿಗೆ ಉದ್ದಿಮೆ ಸ್ಥಾಪಿಸಲು, ನಡೆಸಲು ಹೆಚ್ಚಿನ ಆತ್ಮವಿಶ್ವಾಸ ದೊರೆಯುತ್ತದೆ.

ಬಹು ಉಪಯುಕ್ತವಾದಂಥ ಈ ಬಗೆಯ ಕಾರ್ಯಕ್ರಮಗಳನ್ನು ಸಾಮಾನ್ಯವಾಗಿ ಎಲ್ಲ ಬ್ಯಾಂಕುಗಳೂ ಏರ್ಪಡಿಸುವುವಾದರೂ, ಭಾರತೀಯ ಸ್ಟೇಟ್ ಬ್ಯಾಂಕ್ ಹೆಚ್ಚಾಗಿ ಹಾಗೂ ಪರಿಣಾಮಕಾರಿಯಾಗಿ, ಯಶಸ್ವಿಯಾಗಿ ನಡೆಸಿದೆ. 1983ರಲ್ಲಿ ಪ್ರಾರಂಭಿಸಿದ್ದು, ಸೆಪ್ಟೆಂಬರ್ 1987ರಿಂದ ತಿಂಗಳಿಗೊಂದರಂತೆ ಜಿಲ್ಲಾಕೇಂದ್ರಗಳಲ್ಲಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಕೆನರಾ ಬ್ಯಾಂಕು ಮತ್ತು ಸಿಂಡಿಕೇಟ್ ಬ್ಯಾಂಕುಗಳು ಸಹಯೋಗದಲ್ಲಿ ಧರ್ಮಸ್ಥಳದಲ್ಲಿ ತರಬೇತಿ ಕೇಂದ್ರವೊಂದನ್ನು ಅಲ್ಲಿನ ಹೆಗ್ಗಡೆಯವರ ಸಹಕಾರದಲ್ಲಿ ನಡೆಸುತ್ತಿವೆ. ಅಲ್ಲಿ ವರ್ಷಕ್ಕೆ ಒಂದು ಕಾರ್ಯಕ್ರಮ ಮಹಿಳೆಯರಿಗಾಗಿಯೇ ಮೀಸಲಾಗಿರುತ್ತದೆ.

## ಹಣಕಾಸಿನ ನೆರವು

ವಾಣಿಜ್ಯ ಬ್ಯಾಂಕುಗಳಲ್ಲಿ ಸಾಮಾನ್ಯವಾಗಿ ಸಾಲ ನೀಡಲು ತಾಂತ್ರಿಕ ಅರ್ಹತೆ ಪಡೆದವರಿಗೆ ಮತ್ತು ಉದ್ಯಮಶೀಲರ ಯೋಜನೆ ಎಂದು ಎರಡು ಪ್ರಭೇದಗಳಿದ್ದರೂ, ಸರಳೀಕರಿಸಲು ಹಾಗೂ ಮಹಿಳಾ ಉದ್ಯಮಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇವನ್ನು ಹೀಗೆ ವಿಭಾಗಿಸಬಹುದು:

1 ಸ್ವಯಂ ಉದ್ಯೋಗ/ವೃತ್ತಿಪರರು : ಈ ಪ್ರಭೇದದಲ್ಲಿ ವೈದ್ಯರು, ವಕೀಲರು, ವಾಸ್ತುಶಿಲ್ಪಿಗಳು ಮುಂತಾದ ವೃತ್ತಿಪರರಿಗೆ ರೂ. 5.000 ದಿಂದ ರೂ. 1 ಲಕ್ಷದ ವರೆಗೆ ಸಾಲ ಸಿಗುತ್ತದೆ. ಅಲ್ಲದೆ ಮೂಲ ಬಂಡವಾಳದಲ್ಲಿ ಶೇ. 50 ರಷ್ಟನ್ನೂ ಸಹಾಯವಾಗಿ ಪಡೆಯಬಹುದು. ಅವುಗಳ ಬಡ್ಡಿ ದರ ಹೀಗಿದೆ :

| ಸಾಲದ ಮೊಬಲಗು | ಬಡ್ಡಿದರ (ಶೇ.) |
|---|---|
| ರೂ. 5000ವರೆಗೆ | 12 |
| ರೂ. 5000ದಿಂದ ರೂ. 25000 ವರೆಗೆ | 14.5 |
| ರೂ. 25000ದಿಂದ ರೂ. 1 ಲಕ್ಷದ ವರೆಗೆ | 15.5 |

ಸ್ವ ಉದ್ಯೋಗಿ/ವೃತ್ತಿಪರ ಹಿಂದುಳಿದ ವರ್ಗ/ಜಾತಿಯ ಮಹಿಳೆಯರಿಗೆ ವಿಶೇಷ ರಿಯಾಯಿತಿಯುಂಟು. ಅವರಿಗೆ ಬಡ್ಡಿ ದರ ಶೇ. 14ರಷ್ಟು ಮಾತ್ರ.

2. ವ್ಯಾಪಾರಿ ಹಾಗೂ ವ್ಯಾಪಾರಿ ಚಟುವಟಿಕೆಗಳು : ಮೇಲಿನ ಪ್ರವರ್ಗದಲ್ಲಿ ಸೇರದವರು ಹಾಗೂ ಸೇವಾ ಮತ್ತು ವ್ಯಾಪಾರಿ ವಿಭಾಗದ ಸಾಲಗಾರರು ಈ ಪ್ರವರ್ಗದಲ್ಲಿ ಬರುತ್ತಾರೆ. ಅಂಗಡಿ, ವ್ಯಾಪಾರ, ಮಾರಾಟಗಾರಿಕೆ, ಮುಂತಾದವುಗಳಿಗೆ ಸಾಲ ಸಿಗುತ್ತದೆ. ಆವಶ್ಯಕತೆಗೆ ತಕ್ಕಂತೆ ಸಾಲದ ಬಡ್ಡಿ ದರ ಶೇ. 12½ಯಿಂದ ಶೇ. 14½ರ ವರೆಗೆ.

3. ಇವೆರಡೇ ಅಲ್ಲದೆ ಸಣ್ಣ ಕೈಗಾರಿಕೆಗಳಿಗಾಗಿಯೇ ಸಾಲ ನೀಡುವ ಇನ್ನೊಂದು ಯೋಜನೆಯಿದೆ. ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವವರಿಗೆ ಎಲ್ಲ ಬಗೆಯ ನೆರವನ್ನೂ ನೀಡಲಾಗುತ್ತದೆ. ಇಲ್ಲಿ ವಿಧಿಸುವ ಗರಿಷ್ಠ ಬಡ್ಡಿ ದರ ಶೇ. 16.5.

4 ಯಾವುದೇ ಪರಿಣತಿ ಪಡೆಯದಂಥ ನಗರದ ವಿದ್ಯಾವಂತ ನಿರುದ್ಯೋಗಿ ಯುವಜನರಿಗಾಗಿ ಒಂದು ಯೋಜನೆಯಿದೆ. ಮಹಿಳೆಯರು ಈ ವಿಭಾಗದಲ್ಲಿಯೂ ನೆರವನ್ನು ಪಡೆಯಬಹುದು. ಇದರಲ್ಲಿ ಸಿಗುವ ಸಾಲದ ಪ್ರಮಾಣ ಹೀಗಿದೆ :

ಕೈಗಾರಿಕಾ ವಿಭಾಗದಲ್ಲಿ ಗರಿಷ್ಠ ರೂ. 35,000
ಸೇವಾ ವಿಭಾಗದಲ್ಲಿ ಗರಿಷ್ಠ ರೂ. 25,000
ವ್ಯಾಪಾರ ವಿಭಾಗದಲ್ಲಿ ಗರಿಷ್ಠ ರೂ. 15,000

ಈ ಯೋಜನೆಯಲ್ಲಿ ವಿಧಿಸಲಾಗುವ ಬಡ್ಡಿ ದರ ಶೇ 12.5

5 ನಗರ ಪ್ರದೇಶದ ಬಡಜನರಿಗಾಗಿ ಯೋಜನೆ : ಈ ಯೋಜನೆಯಡಿಯಲ್ಲಿಯೂ ಮಹಿಳೆಯರು ಬ್ಯಾಂಕುಗಳಿಂದ ಸಾಲ ಪಡೆಯಬಹುದು. ಇದರಲ್ಲಿ ಸಿಗುವ ಗರಿಷ್ಠ ಸಾಲದ ಮೊತ್ತ ರೂ. 5,000. ಬಡ್ಡಿ ದರ ಶೇ. 10. ಮರುಪಾವತಿಯನ್ನು 33 ಕಂತುಗಳಲ್ಲಿ ಮಾಡಬೇಕಾಗುತ್ತದೆ. ಪಡಿತರ ಚೀಟಿಯ ಆಧಾರದ ಮೇಲೆ ಈ ಸಾಲ ಸಿಗುತ್ತದೆ.

6 ಭಿನ್ನಕ ಬಡ್ಡಿ ದರ ಯೋಜನೆ : ಈ ಯೋಜನೆಯ ಸಾಲಗಳಿಗೆ ಸ್ಥಳದ/ಚಟುವಟಿಕೆಯ ವ್ಯಾಪ್ತಿಯಲ್ಲಿ ಯಾವುದೇ ಮಿತಿಯಿಲ್ಲ. ನೆರವಿನ ಗರಿಷ್ಠ ಮಿತಿ ರೂ. 6,500. ರೂ. 5,000 ಬಂಡವಾಳ ಹಾಗೂ ರೂ. 1,500 ದುಡಿಯುವ ಬಂಡವಾಳವಾಗಿ ಸಿಗುತ್ತವೆ. ಇದರ ಫಲ ಪಡೆಯಬೇಕಾದರೆ ಆದಾಯ ಗ್ರಾಮೀಣ ಪ್ರದೇಶದಲ್ಲಿ ರೂ. 3,000ಕ್ಕಿಂತ ಕಡಿಮೆಯಿರಬೇಕು. ನಗರ ಪ್ರದೇಶದಲ್ಲಿ ವರ್ಷಕ್ಕೆ ರೂ. 7,200ಕ್ಕಿಂತ ಕಡಿಮೆಯಿರಬೇಕು. ವಿಧಿಸಲಾಗುವ ಬಡ್ಡಿ ದರ ಶೇ. 4.

ಇವುಗಳೇ ಅಲ್ಲದೆ ಸಾಲಮೇಳಗಳಲ್ಲಿಯೂ ಮಹಿಳೆಯರಿಗೆ ಸಾಲ ದೊರೆಯುತ್ತದೆ. ಗರಿಷ್ಠ ರೂ. 5,000ದವರೆಗೆ ದೊರೆಯುವ ಈ ಸಾಲಗಳಿಗೆ ಬಡ್ಡಿ ದರ ಕಡಿಮೆ ಇರುತ್ತದೆ. ಕೈತೋಟ ನಿರ್ಮಿಸಿ ಅದರಲ್ಲಿ ತರಕಾರಿ ಬೆಳೆಯುವುದು ಕರಕುಶಲ ವಸ್ತುಗಳನ್ನು ತಯಾರಿಸಿ ಮಾರಾಟ ಮಾಡುವುದು ಮುಂತಾದವಕ್ಕೆ ಮಹಿಳೆಯರಿಗಾಗಿಯೇ ಪ್ರತ್ಯೇಕ ಯೋಜನೆ ಕೆಲವು ಬ್ಯಾಂಕುಗಳಲ್ಲಿದೆ. ಸಾಲದ ಮೊತ್ತ ರೂ. 3,000ದ ವರೆಗೆ. ಬಡ್ಡಿ ದರ ಶೇ. 16.5.

ವಾಣಿಜ್ಯ ಬ್ಯಾಂಕುಗಳು ದುಡಿಯುವ ಬಂಡವಾಳಕ್ಕೆ ಅಲ್ಲದೆ ಉದ್ಯಮಿಗಳಿಗೆ ಅವಧಿ ಸಾಲವನ್ನೂ ಸ್ಥಿರಾಸ್ತಿಗಳ ಖರೀದಿಗಾಗಿ ಸಾಲವನ್ನೂ ನೀಡುತ್ತವೆ. ಸುಲಭ ಕಂತುಗಳಲ್ಲಿ ತೀರಿಸಬಹುದಾದ ಈ ಸಾಲಗಳಿಗೆ ಬಡ್ಡಿ ದರ ಕಡಿಮೆಯಿರುತ್ತದೆ. ಅಲ್ಲದೆ ಬ್ಯಾಂಕಿನಿಂದ ನಿರಂತರವಾಗಿ ಎಲ್ಲ ವಿಷಯಗಳಲ್ಲಿಯೂ ಮಾರ್ಗದರ್ಶನ ದೊರೆಯುತ್ತದೆ.

## ಭಾರತದ ಕೈಗಾರಿಕೆ ಅಭಿವೃದ್ಧಿ ಬ್ಯಾಂಕು

ಈ ಬ್ಯಾಂಕು ಸಣ್ಣ ಕೈಗಾರಿಕೋದ್ಯಮಿಗಳಿಗೆ ಯಂತ್ರೋಪಕರಣಗಳನ್ನು ಕೊಳ್ಳಲು ಕಡಿಮೆ ಬಡ್ಡಿ ದರಗಳಲ್ಲಿ ದೀರ್ಘಾವಧಿ ಸಾಲಗಳನ್ನು ಕೊಡುತ್ತವೆ. ಅಲ್ಲದೆ ಬ್ಯಾಂಕುಗಳು ತಮ್ಮ ಸಾಲಗಾರರಿಗೆ ಕೊಡುವ ದೀರ್ಘಾವಧಿ ಸಾಲಗಳಿಗೆ ಪುನರ್ಧನ ಪೋಷಣೆ ನೀಡುವುದರ ಮೂಲಕ ವಾಣಿಜ್ಯ ಬ್ಯಾಂಕುಗಳಿಗೂ ಆ ಮೂಲಕ ಸಣ್ಣ ಕೈಗಾರಿಕೋದ್ಯಮಿಗಳಿಗೂ ನೆರವಾಗುತ್ತವೆ.

## ಮಹಿಳಾ ಸಹಕಾರಿ ಬ್ಯಾಂಕು

ರಾಜ್ಯದಲ್ಲಿಯೇ ಪ್ರಥಮವೆನ್ನಲಾದ ಮಹಿಳಾ ಸಹಕಾರಿ ಬ್ಯಾಂಕಿನಲ್ಲಿ ಮಹಿಳೆಯರಿಗೆ ಗರಿಷ್ಠ ರೂ. 500,00/–ವರೆಗೆ ಸಾಲ ನೀಡಬಹುದಾದ ಯೋಜನೆಯಿದೆ. ಇರುವ ಬಹು ಮುಖ್ಯ ಷರತ್ತೆಂದರೆ ಸಾಲಗಾರರು ಆ ಬ್ಯಾಂಕಿನ ಷೇರುದಾರರಾಗಿರಬೇಕು. ಅವರ ಷೇರಿನ ಹಣದ ಮೊತ್ತದ 10ರಷ್ಟನ್ನು ಸಾಲವಾಗಿ ಪಡೆಯಬಹುದು. ಯೋಜನೆಗಳಿಗನುಗುಣವಾಗಿ ಸಾಲದ ಬಡ್ಡಿ ದರ ಶೇ. 15ರಿಂದ 16.5ರ ವರೆಗಿರುತ್ತದೆ. ಇಲ್ಲಿನ ಸಾಲಗಳ ಮಂಜೂರಾತಿಯಲ್ಲಿ ಶೇ. 80ರಷ್ಟು ಮಹಿಳೆಯರಿಗೆ ಮೀಸಲಾಗಿರುವುದೊಂದು ವಿಶೇಷ.

## ರಾಷ್ಟ್ರೀಯ ಸಣ್ಣ ಕೈಗಾರಿಕಾ ನಿಗಮ

ಮಾರಾಟಗಾರಿಕೆ ಎಲ್ಲ ಉದ್ಯಮಿಗಳ, ಅದರಲ್ಲೂ ವಿಶೇಷವಾಗಿ ಮಹಿಳಾ ಉದ್ಯಮಿಗಳ ಒಂದು ಪ್ರಮುಖ ಸಮಸ್ಯೆ. ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಬಯಸುವವರಿಗೆ ರಾಷ್ಟ್ರೀಯ ಸಣ್ಣ ಕೈಗಾರಿಕಾ ನಿಗಮ ಸಹಾಯ ನೀಡುವುದೇ ಅಲ್ಲದೆ, ಆ ಘಟಕಗಳ ಉತ್ಪನ್ನಗಳನ್ನು ಸರಕಾರಕ್ಕೆ ಸರಬರಾಜು ಮಾಡುವ ವ್ಯವಸ್ಥೆ ಹೊಂದಿದೆ ಮತ್ತು ಉತ್ಪನ್ನಗಳ ಮಾರಾಟಕ್ಕಾಗಿ ಅನೇಕ ಮಳಿಗೆಗಳನ್ನೂ, ಕೇಂದ್ರಗಳನ್ನೂ ಅದು ಸ್ಥಾಪಿಸಿದೆ. ಕಂತುಗಳಲ್ಲಿ ಮರುಪಾವತಿ ಮಾಡುವ ಒಪ್ಪಂದದ ಮೇರೆಗೆ ಸಣ್ಣ ಕೈಗಾರಿಕಾ ಘಟಕಗಳಿಗೆ ಯಂತ್ರೋಪಕರಣಗಳನ್ನು ನೀಡುವುದು ಈ ನಿಗಮದ ಮುಖ್ಯ ಚಟುವಟಿಕೆಗಳಲ್ಲೊಂದು. ಇದೆಲ್ಲದರ ಜೊತೆಗೆ ಅದು ತಾಂತ್ರಿಕ ತರಬೇತಿ ಹಾಗೂ ಮಾದರಿ ಯಂತ್ರ ನಿರ್ಮಾಣ ಕೇಂದ್ರಗಳನ್ನು ಸ್ಥಾಪಿಸಿ ತಂತ್ರಜ್ಞರಿಗೆ ಹಾಗೂ ಸಣ್ಣ ಕೈಗಾರಿಕೋದ್ಯಮಿಗಳಿಗೆ ಆವಶ್ಯಕವಾದ ತಾಂತ್ರಿಕ ತರಬೇತಿಯನ್ನು ನೀಡುತ್ತಿದೆ.

## ಸಣ್ಣ ಕೈಗಾರಿಕೆಗಳ ಸೇವಾ ಸಂಸ್ಥೆ

ರಾಷ್ಟ್ರಮಟ್ಟದಲ್ಲಿ ಆಯೋಗ ಅಥವಾ ಮಂಡಳಿಗಳನ್ನು ಹೊಂದಿಲ್ಲದಂಥ ವಸ್ತುಗಳನ್ನು ತಯಾರಿಸುವ ಮತ್ತು ಯಂತ್ರೋಪಕರಣಗಳಿಗಾಗಿ ಬಂಡವಾಳದ ಅಗತ್ಯ ರೂ. 20 ಲಕ್ಷಗಳಿಗೆ ಮೀರದೆ ಇರುವ ಕೈಗಾರಿಕೆಗಳಿಗೆ ಈ ಸಂಸ್ಥೆ ವಿಶೇಷ ನೆರವು ನೀಡುತ್ತದೆ. ಇಂಥ ಸಣ್ಣ ಗಾತ್ರದ ಉದ್ಯಮಗಳನ್ನು ಆರಂಭಿಸಲು ಇಚ್ಛೆ ಇರುವ ಉದ್ಯಮಶೀಲ ವ್ಯಕ್ತಿಗಳು ತಮ್ಮ ಉದ್ದೇಶಿತ ಉದ್ಯಮಗಳ ಬಗ್ಗೆ ಒಂದು ಸ್ಥೂಲವಾದ ನಿರ್ಧಾರವನ್ನು ಕೈಗೊಳ್ಳಲು ಅದರ ಆರ್ಥಿಕ, ತಾಂತ್ರಿಕ ಮತ್ತು ನಿರ್ವಹಣಾ ವಿಷಯಗಳ ಬಗ್ಗೆ ಸಲಹಾತ್ಮಕ ರೂಪದಲ್ಲಿ ತಿಳಿವಳಿಕೆ ನೀಡುವುದು ಈ ಸಂಸ್ಥೆಯ ಮುಖ್ಯ ಕಾರ್ಯವಿಧಾನ. ಸಲಹೆ ನೀಡಲೆಂದೇ ಇರುವ ತಾಂತ್ರಿಕ ತಜ್ಞರು ಹಾಗೂ ಪರಿಣತಿ ಪಡೆದ ಅಧಿಕಾರಿಗಳ ತಂಡವನ್ನು ಹೊಂದಿರುವುದೇ ಅಲ್ಲದೆ, ಈ ಸಂಸ್ಥೆ ಸಣ್ಣ ಕೈಗಾರಿಕೋದ್ಯಮಿಗಳ ಉಪಯೋಗಕ್ಕಾಗಿ ಯಂತ್ರಾಗಾರ, ರಾಸಾಯನಿಕ ಮತ್ತು ಪಿಂಗಾಣಿ ವಸ್ತುಗಳ ಕೆಲವು ಗುಣಗಳನ್ನು ಪರೀಕ್ಷಿಸಲು ಸುಸಜ್ಜಿತ ಪ್ರಯೋಗಶಾಲೆಯೊಂದನ್ನು ಸಹ ಒಳಗೊಂಡಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ಕೈಗಾರಿಕಾ ಚಟುವಟಿಕೆಗಳನ್ನು ಅಭಿವೃದ್ಧಿಪಡಿಸಲು ಕಮ್ಮಾರಿಕೆ, ಚರ್ಮೋದ್ಯೋಗ ಮತ್ತು ಮರಗೆಲಸಗಳಿಗೆ ಸಂಬಂಧಪಟ್ಟ ಕೆಲವು ಯಂತ್ರೋಪಕರಣಗಳಿಂದ ಸಜ್ಜುಗೊಂಡ ಮೂರು ಪ್ರದರ್ಶನ ವಾಹನಗಳು ಸದಾ ಕಾಲ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡು ಅಲ್ಲಿನ ಕುಶಲಕರ್ಮಿಗಳಿಗೆ ತರಬೇತಿ ನೀಡುವ ಕಾರ್ಯದಲ್ಲಿ ತೊಡಗಿರುತ್ತವೆ. ಉದ್ಯಮಶೀಲತೆಯ ವಿಕಾಸವೂ ಸೇರಿದಂತೆ ಅನೇಕ ನಿರ್ವಹಣಾ ಮತ್ತು ತಾಂತ್ರಿಕ ವಿಷಯಗಳ ತರಬೇತಿಯನ್ನು ಈ ಸಂಸ್ಥೆ ಏರ್ಪಡಿಸುತ್ತಿರುತ್ತದೆ. ಸಣ್ಣ ಕೈಗಾರಿಕೆಗಳ ಸಮಸ್ಯೆಗಳನ್ನು ಚರ್ಚಿಸಿ ಅವುಗಳಿಗೆ ಪರಿಹಾರವನ್ನು ಹುಡುಕಲು ಅನೇಕ ವಿಚಾರ ಸಂಕಿರಣಗಳನ್ನು ಈ ಸಂಸ್ಥೆ ಆಗಿಂದಾಗ್ಗೆ ಏರ್ಪಡಿಸುತ್ತಿರುತ್ತದೆ. ಅಸ್ವಸ್ಥವಾದ ಸಣ್ಣ ಕೈಗಾರಿಕೆಗಳ ಹಣಕಾಸಿನ ವ್ಯವಹಾರವನ್ನು ಪರಿಶೀಲಿಸಿ ಅವನ್ನು ಪುನಃ ಲಾಭದಾಯಕವಾಗಿ ಮಾಡುವ ವಿಧಾನವನ್ನು ಸೂಚಿಸುವ, ಹಳೆಯ ತಯಾರಿಕಾ ವಿಧಾನವನ್ನು ಅನುಸರಿಸುತ್ತಿರುವ ಸಣ್ಣ ಕೈಗಾರಿಕೆಗಳನ್ನು ಆಧುನೀಕರಣಗೊಳಿಸುವ ಕಾರ್ಯಕ್ರಮವನ್ನು ರೂಪಿಸುವುದು ಸಣ್ಣ ಕೈಗಾರಿಕಾ ಸೇವಾಸಂಸ್ಥೆಯ ಇತರ ಮುಖ್ಯ ಕಾರ್ಯಭಾರಗಳು.

## ರಾಜ್ಯ ಹಣಕಾಸು ಸಂಸ್ಥೆ

'ಪ್ರಾದೇಶಿಕ ಅಭಿವೃದ್ಧಿ ಬ್ಯಾಂಕ್' ಎಂದೇ ಹೆಸರು ಪಡೆದಿರುವ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಮಹಿಳಾ ಉದ್ಯಮಿಗಳಿಗಾಗಿಯೇ ಪ್ರತ್ಯೇಕ ಯೋಜನೆಗಳನ್ನು ಹೊಂದಿರುವ ಏಕಮಾತ್ರ ಸಂಸ್ಥೆ. ಅದರ ಯೋಜನೆಗಳ ವಿವರ ಹೀಗಿದೆ :

1 ಆಡಳಿತ ನಿರ್ವಹಣೆಗಾಗಿ ಸಹಾಯಧನ : ತಿಂಗಳಿಗೆ ರೂ. 1,000/–ಕ್ಕೆ ಮೀರದಂತೆ ಮಹಿಳಾ ಉದ್ಯಮಿಗಳು ನಡೆಸುವ ಕೈಗಾರಿಕಾ ಘಟಕಗಳಿಗೆ ಪ್ರಾರಂಭಿಕ ಮೂರು ವರ್ಷಗಳ ವರೆಗೆ ಸಹಾಯಧನ.

2 ಬಾಡಿಗೆ ಸಹಾಯಧನ : ಖಾಸಗಿ ಕೈಗಾರಿಕಾ ಮಳಿಗೆ ಅಥವಾ ಸರ್ಕಾರಿ ಕೈಗಾರಿಕಾ ಮಳಿಗೆ ಅಥವಾ ಕಟ್ಟಡಕ್ಕೆ ಹೊಸ ಕೈಗಾರಿಕಾ ಘಟಕಗಳು ಪಾವತಿ ಮಾಡಬೇಕಾದ ಬಾಡಿಗೆಯಲ್ಲಿ ತಿಂಗಳಿಗೆ ಗರಿಷ್ಠ ರೂ. 3.000ದಂತೆ ಶೇ. 60ರಷ್ಟನ್ನು 2 ವರ್ಷಗಳ ಸಹಾಯಧನವಾಗಿ ನೀಡುವುದು.

3 ತಂತ್ರಜ್ಞಾನ ಪಡೆಯಲು ವಿದೇಶ ಪ್ರವಾಸಕ್ಕೆ ಸಹಾಯಧನ.

4 ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ಮಹಿಳಾ ಉದ್ಯಮಿಗಳಿಗೆ ಪ್ರವರ್ತಕರ ಪಾಲಿನ ಸಹಾಯಧನ ಮತ್ತು ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತ ಉದ್ಯಮಿಗಳಿಗೆ ಪ್ರವರ್ತಕರ ಪಾಲಿನ ಬಂಡವಾಳ.

5 ಭಾರತೀಯ ಕೈಗಾರಿಕಾ ಹಣಕಾಸು ನಿಗಮ (ಐ.ಎಫ್.ಸಿ.ಐ.)ದ ಬಡ್ಡಿ ಸಹಾಯಧನ ಯೋಜನೆ : ಮಹಿಳಾ ಉದ್ಯಮಿಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಲು ಐಎಫ್‌ಸಿಐ ಈ ಯೋಜನೆಯನ್ನು ಪ್ರಾರಂಭಿಸುವ ಮೂಲಕ ಮಹಿಳಾ ಉದ್ಯಮಿಗಳು ನೀಡಬೇಕಾದ ಬಡ್ಡಿಯ ಸ್ವಲ್ಪ ಭಾಗವನ್ನು ಸಹಾಯಧನವಾಗಿ ನೀಡುತ್ತಿದೆ. ಇದರನ್ವಯ ಮಹಿಳೆಯರು ಸ್ಥಾಪಿಸುವ ಗ್ರಾಮೀಣ, ಕುಟೀರ, ಅತಿಸಣ್ಣ, ಸಣ್ಣ, ಪೂರಕ ಅಥವಾ ಮಧ್ಯಮ ಪ್ರಮಾಣದ ಯಾವುದೇ ಕ್ಷೇತ್ರದ ಕೈಗಾರಿಕಾ ಘಟಕಗಳೂ ಸೇರಿದಂತೆ ಗರಿಷ್ಠ 3 ಕೋಟಿ ರೂ.ಗಳ ವರೆಗೆ ಯೋಜನಾ ವೆಚ್ಚ ಹೊಂದಿದ ಎಲ್ಲ ಘಟಕಗಳೂ ಬಡ್ಡಿಯ ಸಹಾಯಧನ ಪಡೆಯಲು ಅರ್ಹವಾಗಿವೆ. ಈ ಸಹಾಯಧನ ಒಮ್ಮೆ ಮಾತ್ರ ದೊರೆಯುತ್ತದೆ.

6 ಕರ್ನಾಟಕ ಸಲಹಾ ಸೇವಾ ಸಂಸ್ಥೆ (ಟೆಕ್ಸಾಕ್) ಫೋರ್ಡ್ ಫೌಂಡೇಷನ್ನಿನ ನೆರವಿನಿಂದ 1984ರಲ್ಲಿ ಮಹಿಳೆಯರಿಗಾಗಿಯೇ ಪ್ರತ್ಯೇಕ ವಿಭಾಗವೊಂದನ್ನು ತೆರೆದಿದೆ. ಈ ವಿಭಾಗ ಮಹಿಳಾ ಉದ್ಯಮಿಗಳಿಗೆ ಉದ್ಯಮ ಸ್ಥಾಪಿಸುವ ಬಗ್ಗೆ ಸಲಹಾ ಸೇವೆ ಒದಗಿಸುವುದರ ಜೊತೆಗೆ ಮಹಿಳೆಯರಿಗೆ ಯೋಜನಾ ವರದಿ ತಯಾರಿಕೆ ಹಾಗೂ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿಯೂ ನೆರವನ್ನು ನೀಡುತ್ತದೆ.

ಈ ವಿಭಾಗದಲ್ಲಿ ಮಹಿಳೆಯರಿಗಾಗಿ ವಿಶೇಷ ಉದ್ಯಮಶೀಲತೆಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಏರ್ಪಡಿಸಿ, ಕೈಗಾರಿಕೆ ಸ್ಥಾಪಿಸುವ ಪ್ರಾರಂಭದಲ್ಲಿ ಕೈಗೊಳ್ಳಬೇಕಾದ ಕ್ರಮಗಳು, ಸರ್ಕಾರ ಮತ್ತಿತರ ಸಂಸ್ಥೆಗಳಿಂದ ಮಹಿಳಾ ಉದ್ಯಮಿಗಳಿಗೆ ದೊರೆಯುವ ಸವಲತ್ತುಗಳು, ಯೋಜನಾ ವರದಿ ತಯಾರಿಕೆ, ಲೆಕ್ಕಪತ್ರ ನಿರ್ವಹಣೆ

ಮುಂತಾದ ವಿಷಯಗಳ ಬಗ್ಗೆ ತರಬೇತಿ ನೀಡಲಾಗುವುದು.

ಈ ಸೌಲಭ್ಯಗಳೇ ಅಲ್ಲದೆ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯಲ್ಲಿ ಯಾವುದೇ ಉದ್ಯಮಿಗೂ ಸಿಗಬಹುದಾದ ಹಲವು ಬಗೆಯ ರಿಯಾಯಿತಿ, ಪ್ರೋತ್ಸಾಹಗಳೂ ಇವೆ. ಮಹಿಳಾ ಉದ್ಯಮಿಗಳೂ ಅವನ್ನು ಬಳಸಿಕೊಳ್ಳಬಹುದಾಗಿದೆ.

## ಗ್ರಾಮೀಣ ಮಹಿಳೆಯರಿಗೆ ನೆರವು

ಗ್ರಾಮೀಣ ಪ್ರದೇಶಗಳಲ್ಲ ಸಾಮಾನ್ಯವಾದ ಒಂದು ಯೋಜನೆ ಎಂದರೆ, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ. ಈ ಯೋಜನೆ ಮಹಿಳೆ, ಪುರುಷರಿಬ್ಬರಿಗೂ ಸಮಾನವಾದುದಾಗಿದೆ. ಈ ಯೋಜನೆಯಡಿಯಲ್ಲಿ ದೇಶದ ಪ್ರತಿಯೊಂದು ಬ್ಯಾಂಕ್ ಕಛೇರಿಯೂ 3,000 ಕುಟುಂಬಗಳನ್ನು ಆರಿಸಿ ಬ್ಲಾಕ್‌ಗಳನ್ನಾಗಿ ಮಾಡಿ, ಪ್ರತಿ ಬ್ಲಾಕಿನಲ್ಲೂ ವ್ಯವಸಾಯ ಹಾಗೂ ಸಂಬಂಧಿಸಿದ ಚಟುವಟಿಕೆಗಳಲ್ಲಿ 2,500 ಕುಟುಂಬಗಳನ್ನೂ, ಗ್ರಾಮೀಣ ಹಾಗೂ ಗುಡಿಕೈಗಾರಿಕೆಗಳಲ್ಲಿ 500 ಕುಟುಂಬಗಳನ್ನೂ, ಸೇವಾ ವಿಭಾಗದಿಂದ 500 ಕುಟುಂಬಗಳನ್ನೂ ಆರಿಸಿ ಅವುಗಳಿಗೆ ಸಾಲ ನೀಡುವ ವ್ಯವಸ್ಥೆ ಇದೆ. ಈ ಯೋಜನೆಯಲ್ಲಿ ಸಿಗುವ ಗರಿಷ್ಠ ಮೊಬಲಗು ರೂ. 3,000/- ; ವಿಧಿಸುವ ಬಡ್ಡಿ ದರ ಶೇ. 10.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯೇ ಅಲ್ಲದೆ ವಾಣಿಜ್ಯ ಬ್ಯಾಂಕುಗಳೂ, ಗ್ರಾಮೀಣ ಬ್ಯಾಂಕುಗಳೂ ಹಲವಾರು ಸಾಲದ ಯೋಜನೆಗಳನ್ನು ಹೊಂದಿವೆ. ಕೃಷಿ ಹಾಗೂ ಕೃಷಿಯೇತರ ಚಟುವಟಿಕೆಗಳಿಗೆ ನೀಡಲಾಗುವ ಸಾಲಗಳನ್ನು ಮಹಿಳೆಯರೂ ಪಡೆಯಬಹುದು. ಇದರಲ್ಲಿ ಕುರಿ, ಜೇನು, ಎಮ್ಮೆ, ಹಸು, ಕೋಳಿ ಸಾಕಣೆ ಅಲ್ಲದೆ ನೂಲುವುದು, ಬೀಡಿ ಕಟ್ಟುವುದು, ಅಗರಬತ್ತಿ ತಯಾರಿಸುವುದು, ಬಣ್ಣ ಹಾಕುವುದು, ಕರಕುಶಲ ವಸ್ತು ತಯಾರಿಕೆ ಮುಂತಾದವುಗಳಿಗೆ ಗ್ರಾಮೀಣ ಬ್ಯಾಂಕುಗಳು ಸಾಲ ನೀಡುತ್ತವೆ. ಬಡ್ಡಿ ದರ ಕಡಿಮೆ ಇರುತ್ತದೆ. ಹಿಂದುಳಿದ ವರ್ಗ/ಜಾತಿಯ ಮಹಿಳೆಯರಿಗೆ ರಿಯಾಯಿತಿ ಇರುತ್ತದೆ.

## ಭೂ ಬ್ಯಾಂಕು

ಗ್ರಾಮೀಣ ಪ್ರದೇಶಗಳಲ್ಲಿ ಇನ್ನಾವುದೇ ಬ್ಯಾಂಕುಗಳಿಗಿಂತ ಹೆಚ್ಚಿನ ಪ್ರಭಾವ ಹೊಂದಿರುವುದು ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು. ಭೂ ಬ್ಯಾಂಕೆಂದೂ ಹೆಸರಾಗಿರುವ ಇದು ತನ್ನ 177 ಪ್ರಾಥಮಿಕ ಬ್ಯಾಂಕುಗಳ ಮೂಲಕ ಸಾಲ ವಿತರಿಸುತ್ತಿದೆ. ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಸಾಲ ಕೊಡುವ ಈ ಬ್ಯಾಂಕು ಗ್ರಾಮೀಣ ಕೈಗಾರಿಕೆ, ಸಣ್ಣ ಕೈಗಾರಿಕೋದ್ಯಮ ಮತ್ತು ಸೇವಾ ಉದ್ದಿಮೆ ಈ ಮೂರೂ ವಿಭಾಗಗಳಲ್ಲಿಯೂ ಸಾಲ ವಿತರಿಸುತ್ತಿದೆ. ಸಾಲದ ಗರಿಷ್ಠ ಮೊಬಲಗು ರೂ. 30,000. ಇದನ್ನು 10 ವರ್ಷಗಳಲ್ಲಿ ತೀರಿಸಬೇಕು. ವಿಧಿಸುವ ಬಡ್ಡಿದರ ಶೇ. 10.

ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರಿಗೆ ವೈಯಕ್ತಿಕವೇ ಅಲ್ಲದೆ ಅನೇಕ ಸಮೂಹ ಸಾಲ ಯೋಜನೆಗಳೂ ಇವೆ. ಗ್ರಾಮೀಣ ಪ್ರದೇಶದ ಮಹಿಳೆ ಹಾಗೂ ಮಕ್ಕಳ ಅಭಿವೃದ್ಧಿಗಾಗಿ ಇರುವ ಯೋಜನೆಯಲ್ಲಿ (ಡ್ವಾಕ್ರಾ) ಆರ್ಥಿಕವಾಗಿ ಹಿಂದುಳಿದ ಒಂದೇ ಊರಿನ ಮಹಿಳೆಯರನ್ನು ಒಂದು ಗುಂಪಾಗಿ (ಸಾಮಾನ್ಯವಾಗಿ ಹತ್ತು ಜನರ ಸಮೂಹ) ಗುರುತಿಸಿ ಸಹಾಯಧನವನ್ನು ಬ್ಯಾಂಕಿನ ಖಾತೆಗೆ ಜಮಾ ಮಾಡುತ್ತಾರೆ. ದುಡಿಯುವ ಬಂಡವಾಳವನ್ನೂ ಕೊಡುತ್ತಾರೆ. ಇದೇ ಅಲ್ಲದೆ ಟ್ರೈಸಮ್ ಎನ್ನುವ ಇನ್ನೊಂದು ಯೋಜನೆಯಲ್ಲಿ ಜಿಲ್ಲಾ ತರಬೇತಿ ಕೇಂದ್ರಗಳಲ್ಲಿ ಮಹಿಳೆಯರಿಗೆ ತರಬೇತಿ ಕೊಟ್ಟು ಅನಂತರ ಬ್ಯಾಂಕುಗಳ ಮೂಲಕ ಸಾಲ ವಿತರಿಸಿ ಸ್ವಾವಲಂಬಿಗಳಾಗುವಂತೆ ಮಾಡುತ್ತಾರೆ.

## ಕೊರತೆಗಳ ಸರಮಾಲೆ

ಇವು ಬ್ಯಾಂಕು ಹಾಗೂ ಇತರ ಹಣಕಾಸು ಸಂಸ್ಥೆಗಳಿಂದ ದೊರೆಯಬಹುದಾದ ನೆರವುಗಳು ಮಾತ್ರ. ಇದೇ ಅಲ್ಲದೆ ಸರ್ಕಾರದ ವತಿಯಿಂದ ಸರ್ಕಾರಿ ಇಲಾಖೆಗಳ ಮೂಲಕ ಗ್ರಾಮೀಣ ಬಡ ಮಹಿಳೆಯರಿಗೆ ಆರ್ಥಿಕ ನೆರವಿನ ಯೋಜನೆಗಳಿವೆ. ವಿಷಾದದ ಸಂಗತಿಯೆಂದರೆ, ಈ ಸೌಲಭ್ಯಗಳನ್ನು ಮಹಿಳೆಯರು ಹೆಚ್ಚುಹೆಚ್ಚಾಗಿ ಬಳಸಿಕೊಳ್ಳುತ್ತಿಲ್ಲ. ಇದಕ್ಕೆ ಹಲವಾರು ಕಾರಣಗಳಿರಬಹುದು : ಮಾಹಿತಿಯ ಕೊರತೆ, ಪ್ರಚಾರದ ಕೊರತೆ, ಮಹಿಳೆಯರ ಸಂಕೋಚ ಸ್ವಭಾವ, ಆತ್ಮವಿಶ್ವಾಸದ ಕೊರತೆ, ಅಧೈರ್ಯ, ಶಿಕ್ಷಣದ ಕೊರತೆ, ಮುಂತಾದವು. ಅವರು ಮುಂದೆ ಬಂದು ಸೌಲಭ್ಯಗಳನ್ನು ಬಳಸಿಕೊಳ್ಳುವಂತಾಗಲು, ಅವರಲ್ಲಿ ಧೈರ್ಯ ತುಂಬಿ ಎಲ್ಲ ವಿಚಾರಗಳ ಬಗ್ಗೆ ಸರಿಯಾದ ಮಾಹಿತಿ ಸಿಕ್ಕು, ಮಾರ್ಗದರ್ಶನ ದೊರಕಬೇಕು.

ಈ ಕೆಲಸ ಭಾಗಶಃ ಬ್ಯಾಂಕುಗಳ ಅಧಿಕಾರಿಗಳಿಂದ ನಡೆಯುತ್ತಿದ್ದರೂ ಪರಿಣಾಮಕಾರಿಯಾಗಿ ನಡೆಯಬೇಕಾದರೆ ಸ್ವಯಂ ಸೇವಾ ಸಂಸ್ಥೆಗಳ ನೆರವು ಅತ್ಯಗತ್ಯ. ಇಂಥ ಸಂಸ್ಥೆಗಳ ಪೈಕಿ ಯಶಸ್ವಿಯಾಗಿ ಕೆಲಸ ನಿರ್ವಹಿಸುತ್ತಿರುವ ಕರ್ನಾಟಕದ ಉದ್ಯಮಶೀಲ ಮಹಿಳೆಯರ ಸಂಸ್ಥೆ 'ಅವೇಕ್' ಒಂದು. ಇಲ್ಲಿಗೆ ಬರುವ ಮಹಿಳೆಯರಿಗೆ ಯಾವುದೇ ತರಬೇತಿ ಕಾರ್ಯಕ್ರಮವಿಲ್ಲದೆ ಸರಳವಾಗಿ ಒಂದು ಉದ್ಯಮ ಸ್ಥಾಪಿಸಲು ಬೇಕಾಗುವ ಸಕಲ ಮಾಹಿತಿಗಳನ್ನೂ ಈ ಸಂಸ್ಥೆಯಲ್ಲಿ ಕೊಡಲಾಗುತ್ತದೆ. ಬರುವ ವರ್ಷಗಳಲ್ಲಿ ಇನ್ನೂ ಹೆಚ್ಚಿನ ಯೋಜನೆಗಳನ್ನು ಹೊಂದಲಿರುವ ಈ ಸಂಸ್ಥೆ ವಿಶ್ವ ಮಹಿಳಾ ಬ್ಯಾಂಕಿನ ಸಹಯೋಗದಲ್ಲಿ ವಾಣಿಜ್ಯ ಬ್ಯಾಂಕುಗಳೊಡನೆ 50 : 25 : 25 ಪ್ರಮಾಣದಲ್ಲಿ ಬಂಡವಾಳ ಹೂಡಿ ಸಾಲ ವಿತರಿಸುವ ಯೋಜನೆ ಹಾಕಿಕೊಂಡಿದೆ. ಈ ಯೋಜನೆ ಪೂರ್ಣವಾಗಿ ಮಹಿಳೆಯರಿಗೇ ಮೀಸಲಾಗಿದ್ದು ಎಲ್ಲ ವರ್ಗದ ಮಹಿಳೆಯರೂ ಪಾಲುಗೊಳ್ಳಬಹುದಾಗಿದೆ.

## ಸುಧಾರಣೆಗೆ ಸಲಹೆಗಳು

ಈಗಾಗಲೇ ತಿಳಿದಿರುವಂತೆ ಇಂದಿನ ಪರಿಸ್ಥಿತಿಯಲ್ಲಿ ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆ ಅತ್ಯಗತ್ಯವಾಗಿದೆ. ಅವರು ನಿರುದ್ಯೋಗಿಗಳಾಗದ ಸ್ವಂತ ಉದ್ಯಮಗಳನ್ನಾದರೂ ಸ್ಥಾಪಿಸಿ ತಮ್ಮ ಕಾಲ ಮೇಲೆ ತಾವು ನಿಲ್ಲುವಂತಾಗಲು ಸರ್ಕಾರದ, ಸಮಾಜದ ನೆರವು ಅತ್ಯಗತ್ಯ. ಈ ದಿಸೆಯಲ್ಲಿ ಹಲವಾರು ಸುಧಾರಣೆಗಳು ಈಗಿರುವ ವ್ಯವಸ್ಥೆಯಲ್ಲಿ ಅಗತ್ಯ. ಅವೆಂದರೆ :

1 ಮಹಿಳಾ ಉದ್ಯಮಿಗಳು ಎದುರಿಸುತ್ತಿರುವ ಪ್ರಮುಖಸಮಸ್ಯೆಯಾದ ಮಾರಾಟಗಾರಿಕೆಗೆ ಒಂದು ಪರಿಹಾರ ಸಾಧ್ಯವಾಗಿ, ಈಗಿರುವ ರಾಷ್ಟ್ರೀಯ ಸಣ್ಣ ಕೈಗಾರಿಕಾ ನಿಗಮದಲ್ಲಿ ಮಹಿಳೆಯರ ಉದ್ಯಮಗಳ ಉತ್ಪನ್ನಗಳ ಮಾರಾಟಕ್ಕೆ ಪ್ರತ್ಯೇಕ ವಿಭಾಗ ತೆರೆಯಬೇಕು. ಸರ್ಕಾರವೂ ಮಹಿಳಾ ಉದ್ಯಮಗಳ ಉತ್ಪನ್ನಕ್ಕೆ ಮಾರಾಟ ವ್ಯವಸ್ಥೆ ಮಾಡಬೇಕು.

2 ಸರ್ಕಾರಿ ಯಂತ್ರಗಳಲ್ಲಿನ ಅನಗತ್ಯ ವಿಳಂಬ, ಅದರಲ್ಲೂ ಮಹಿಳಾ ಉದ್ಯಮಿಗಳ ಕೆಲಸಗಳಿಗೆ, ಕಡಿಮೆಯಾಗಿ, ಸುಲಲಿತವಾಗಿ ಕೆಲಸ ಸಾಗುವ ವ್ಯವಸ್ಥೆಯಾಗಬೇಕು.

3 ಪ್ರತಿ ಬ್ಯಾಂಕಿನ ಕೇಂದ್ರ ಮತ್ತು ಪ್ರಾದೇಶಿಕ ಕಛೇರಿಗಳಲ್ಲಾದರೂ ಮಹಿಳಾ ಉದ್ಯಮಿಗಳ ಕುಂದುಕೊರತೆ ವಿಚಾರಿಸುವ, ಮಾರ್ಗದರ್ಶನ ನೀಡುವ ವಿಭಾಗವೊಂದಿರಬೇಕು. ಇದರಲ್ಲಿ ಮಹಿಳೆಯರೇ ಹೆಚ್ಚಾಗಿದ್ದರೆ ಒಳ್ಳೆಯದು.

4 ಮಹಿಳೆಯರ ಉದ್ಯಮಕ್ಕೆ ಕಚ್ಚಾವಸ್ತು ಪೂರೈಕೆ, ಸಾಗಣೆ ಇವುಗಳಿಗೆ ಅನುಕೂಲತೆ ಬೇಕು.

5 ಈಗಿರುವ ಯೋಜನೆಗಳಲ್ಲಿ ಮಹಿಳೆಯರಿಗೆಂದೇ ಮೀಸಲಾದ ಯೋಜನೆಗಳಲ್ಲಿ ಅಂಥವು ಬಂದು ಸೌಕರ್ಯಗಳು ಹೆಚ್ಚಬೇಕು. ಅವನ್ನು ಬಳಸಿಕೊಂಡು ಈ ಎಲ್ಲ ಅನುಕೂಲತೆಗಳು ದೊರೆತಾಗ ಹೆಚ್ಚು ಹೆಚ್ಚು ಮಹಿಳೆಯರು ಆರ್ಥಿಕ ಸ್ವಾವಲಂಬಿಗಳಾಗುವುದೇ ಅಲ್ಲದೆ ಬೇರೆಯವರಿಗೂ ಸ್ಫೂರ್ತಿ ಬಂದು ಅವರೂ ಪಾಲುಗೊಳ್ಳುವಂತಾಗಿ ರಾಷ್ಟ್ರೀಯ ಆದಾಯ ಹೆಚ್ಚಾಗುವುದರಲ್ಲಿ ಸಂದೇಹವಿಲ್ಲ.



# ಬ್ಯಾಂಕಿಂಗ್ ಸುದ್ದಿಸಾರ

'ರಂ'

## ಪ್ರವರ್ತಕರ ಪಾಲು ಕಡಿತ

ಭಾರತದ ಕೈಗಾರಿಕಾ ಹಣಕಾಸು ಬ್ಯಾಂಕಿನಿಂದ ಹಣಕಾಸು ನೆರವು ಪಡೆಯುವ ಪರಿಯೋಜನೆಗಳಲ್ಲಿ ಪ್ರವರ್ತಕರು ತರಬೇಕಾದ ಕನಿಷ್ಠ ಮೊಬಲಗನ್ನು ಕಡಿಮೆಗೊಳಿಸಲಾಗಿದೆ. ಬಹು ದೊಡ್ಡ ಹಾಗೂ ಆಡಳಿತವಲಯದ ಪರಿಯೋಜನೆಗಳ ಗಾತ್ರ ದೊಡ್ಡದಾದಷ್ಟೂ ಪ್ರವರ್ತಕರು ತರಬೇಕಾದ ಹಣ ಪ್ರತಿಶತ ಕಡಿಮೆಯಾಗುತ್ತ ಹೋಗುತ್ತದೆ. 25 ಕೋಟಿ ರೂಗಳ ವರೆಗಿನ ಪರಿಯೋಜನೆಗಳಿಗೆ ಶೇ. 22% ರಷ್ಟಿರಬೇಕಾದ ಪ್ರವರ್ತಕರ ಪಾಲು 50 ಕೋಟಿ ರೂಗಳವರೆಗಿನ ಪರಿಯೋಜನೆಗಳಿಗೆ ಶೇ 17.5ಕ್ಕೆ ಇಳಿಯುತ್ತದೆ. 50 ಕೋಟಿ ರೂಗಿಂತ ಹೆಚ್ಚಿನ ಪರಿಯೋಜನೆಗಳಿಗೆ ಪ್ರವರ್ತಕರು ಶೇ. 10ರಷ್ಟು ಹಣ ಒದಗಿಸಿದರೆ ಸಾಕು.

## ಹೊಸ ಕೈಗಾರಿಕಾ ನೀತಿ

ಹಿಂದುಳಿದ ಪ್ರದೇಶಗಳಲ್ಲಿ ಸ್ಥಾಪಿಸಲಾಗುವ ಕೈಗಾರಿಕೆಗಳಿಗೆ ಪರವಾನಗಿ ವಿನಾಯ್ತಿ, ಏಕಸ್ವಾಮ್ಯ ಹಾಗೂ ನಿರ್ಬಂಧಿತ ವ್ಯಾಪಾರಿ ಆಚರಣೆ; ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮದ ವ್ಯಾಪ್ತಿಗೆ ಒಳಪಡುವ ಕಂಪನಿಗಳು ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆ ಸ್ಥಾಪಿಸಲು ಕೈಗಾರಿಕಾ ಪರವಾನಗಿ ಪಡೆಯಬೇಕಾದ್ದಿಲ್ಲ (ಕೆಲವು ಸಂದರ್ಭಗಳನ್ನುಳಿದು). ಇತರೇ ಕಂಪನಿಗಳು ಇತರ ಪ್ರದೇಶಗಳಲ್ಲಿ ಕೈಗಾರಿಕೆ ಸ್ಥಾಪಿಸಲು ರೂ. 15 ಕೋಟಿ ವರೆಗಿನ ಪರಿಯೋಜನೆಗಳಿಗೆ ಕೈಗಾರಿಕಾ ಪರವಾನಗಿ ಪಡೆಯುವ ಆವಶ್ಯಕತೆ ಇರುವುದಿಲ್ಲ. ಹಿಂದುಳಿದ ಪ್ರದೇಶಗಳಲ್ಲಿ 50 ಕೋಟಿ ರೂ ವರೆಗಿನ ಪರಿಯೋಜನೆಗಳಿಗೆ ಕೈಗಾರಿಕಾ ಪರವಾನಗಿ ಅಗತ್ಯವಿಲ್ಲ. ಸರ್ಕಾರ 100 ಬೆಳವಣಿಗೆ ಕೇಂದ್ರಗಳನ್ನು ಗುರುತಿಸಿ ಅಲ್ಲಿ ಕೈಗಾರಿಕೆಗೆ ಬೇಕಾದ ಎಲ್ಲ ಆಧೋರಚನೆಯನ್ನು ನಿರ್ಮಿಸಿ ಕೈಗಾರಿಕೆಗಳನ್ನು ಆಕರ್ಷಿಸುವ ಯೋಜನೆ ಹಾಕಿಕೊಂಡಿದೆ.

## ಬಿಓಬಿ ಫಿಸ್ಕಲ್ ಸರ್ವಿಸಸ್ ಪರಿಮಿತ

ಬ್ಯಾಂಕ್ ಆಫ್ ಬರೋಡ ವಣಿಕ ಬ್ಯಾಂಕಿಂಗ್, ಗುತ್ತಿಗೆ, ವಿನಿಯೋಜನಾ ಸಲಹೆ ಇತ್ಯಾದಿ ಚಟುವಟಿಕೆಗಳನ್ನು ನಡೆಸುವ ಒಂದು ಸಹಾಯಕ ಕಂಪನಿಯನ್ನು ಪ್ರಾರಂಭಿಸಿದೆ. ಇವರ ಅಧಿಕೃತ ಬಂಡವಾಳ ರೂ. 50 ಕೋಟಿ : ಪಾವತಿಯಾದ ಬಂಡವಾಳ ರೂ. 10 ಕೋಟಿ

## ವಿಶ್ವಬ್ಯಾಂಕ್ ಹಾಗೂ ಅಂತರರಾಷ್ಟ್ರೀಯ ಅಭಿವೃದ್ಧಿ ಅಭಿಕರಣದ ನೆರವು

ಉತ್ತರ ಪ್ರದೇಶದಲ್ಲಿ ಒಂದು ವಿದ್ಯುಚ್ಛಕ್ತಿ ಯೋಜನೆ ಕೈಗೊಳ್ಳಲು ವಿಶ್ವ ಬ್ಯಾಂಕ್ 35 ಕೋಟಿ ಡಾಲರ್‌ಗಳ ಹಾಗೂ ತಮಿಳು ನಾಡಿನಲ್ಲಿ ನಗರಾಭಿವೃದ್ಧಿಗಾಗಿ ಅಂತರರಾಷ್ಟ್ರೀಯ ಅಭಿವೃದ್ಧಿ ನಿಗಮ 30.02 ಕೋಟಿ ವಿದ್ರಾಹಗಳ (SDR) ನೆರವು ನೀಡಲು ಸಮ್ಮತಿಸಿದೆ. ವಿಶ್ವ ಬ್ಯಾಂಕ್ ಆಶ್ರಯದಲ್ಲಿ ಪ್ಯಾರಿಸ್‌ನಲ್ಲಿ ನಡೆದ ಭಾರತ ನೆರವು ಸಂಗಮ (ಕಾನ್ಸೋರ್ಟಿಯಂ) 1988–89ಕ್ಕೆ ರಿಯಾಯ್ತಿ ಸಹಿತ ಹಾಗೂ ರಿಯಾಯ್ತಿ ರಹಿತ ನೆರವೂ ಸೇರಿದಂತೆ 60 ಕೋಟಿ ಡಾಲರುಗಳ ನೆರವು ನೀಡಲು ಸಮ್ಮತಿಸಿದೆ.

## ಗುತ್ತಿಗೆ ಕಂಪನಿಗಳಿಗೆ ಬ್ಯಾಂಕು ಸಾಲ ಸೌಲಭ್ಯ

ಗುತ್ತಿಗೆ ಕಂಪನಿಗಳಿಗೆ ಸಾಲ ನೀಡಲು ಮಾನದಂಡಗಳನ್ನು ಭಾರತೀಯ ರಿಸರ್ವ್ ಬ್ಯಾಂಕು ರೂಪಿಸಿದೆ. ವಾಣಿಜ್ಯ ಬ್ಯಾಂಕುಗಳು ಗುತ್ತಿಗೆ ಕಂಪನಿಗಳಿಗೆ ಅವುಗಳ ನಿವ್ವಳ ಸ್ವಂತ ನಿಧಿಗಳ ಮೂರರಷ್ಟನ್ನು ಮಾತ್ರ ಸಾಲವಾಗಿ ನೀಡಬಹುದು. ಗುತ್ತಿಗೆ ಕಂಪನಿಗಳು ಎತ್ತಬಹುದಾದ ಒಟ್ಟು ಸಾಲದ ಮಿತಿಯೊಳಗೆ ಬ್ಯಾಂಕಿನಿಂದ ಪಡೆದ ಸಾಲವೂ ಸೇರುತ್ತದೆ. ನಿವ್ವಳ ಸ್ವಂತ ನಿಧಿಗಳಲ್ಲಿ ಪಾವತಿಯಾದ ಬಂಡವಾಳ, ಮೀಸಲು ನಿಧಿ (ನಿರ್ದಿಷ್ಟ ಉದ್ದೇಶಕ್ಕಾಗಿ ತೆಗೆದಿರಿಸಿದ್ದು), ರಾಜಸ್ವ ವೆಚ್ಚದ ಸಂಚಿತ ಶಿಲ್ಕು ಸೇರಿದೆ.

## ಯೂರೋ-ಯೆನ್ ಬಾಂಡು

1,500 ಕೋಟಿ ಯೆನ್‌ಗಳ ಯೂರೋ-ಯೆನ್ ಬಾಂಡುಗಳನ್ನು ಭಾರತೀಯ ಸ್ಟೇಟ್ ಬ್ಯಾಂಕ್ ಇತ್ತೀಚೆಗೆ ಬಿಡುಗಡೆ ಮಾಡಿತು. ಇಂಡಸ್ಟ್ರಿಯಲ್ ಬ್ಯಾಂಕ್ ಆಫ್ ಜಪಾನ್, ಇಂಟರ್‌ನ್ಯಾಷನಲ್ ಲಿಮಿಟೆಡ್ ವ್ಯವಸ್ಥೆಗೊಳಿಸಿದ ಈ ಬಾಂಡುಗಳು 5 ವರ್ಷ ಅವಧಿಯವಿದ್ದು, 5.25%ಬಡ್ಡಿಯವಾಗಿವೆ. ಇದರಿಂದಾಗಿ ಯೂರೋ-ಯೆನ್ ಮಾರುಕಟ್ಟೆಯನ್ನು ಪ್ರಥಮವಾಗಿ ಪ್ರವೇಶಿಸಿದ ಭಾರತೀಯ ಸಂಸ್ಥೆ ಎನ್ನುವ ಕೀರ್ತಿ ಭಾರತೀಯ ಸ್ಟೇಟ್ ಬ್ಯಾಂಕ್‌ಗೆ ಸಂದಿದೆ.

## ಅಸ್ವಸ್ಥ ಕೈಗಾರಿಕಾ ಘಟಕಗಳ ಸಮನ್ವಯ ಕೋಶ

ಅಸ್ವಸ್ಥ ಘಟಕಗಳ ಬಗೆಗಿನ ಮಾಹಿತಿಯ ತೀವುವೆ ಮನೆಯಾಗಿ ಸೇವೆ ಸಲ್ಲಿಸಲು ಭಾರತೀಯ ರಿಸರ್ವ್ ಬ್ಯಾಂಕ್ ಒಂದು ಕೋಶವನ್ನು ತೆರೆದಿದೆ. ಈ ಕೋಶ ಮಾಹಿತಿ ನೀಡುವುದರ ಜೊತೆಗೆ ಬ್ಯಾಂಕುಗಳು, ಹಣಕಾಸು ಸಂಸ್ಥೆಗಳು, ಹಾಗೂ ಅಸ್ವಸ್ಥ ಘಟಕಗಳಿಗೆ ಸಂಬಂಧಿಸಿದ ಇತರ ಅಭಿಕರಣ, ಹಾಗೂ ಸರಕಾರದೊಡನೆ ಸಮನ್ವಯ ಸಾಧಿಸಲು ನೆರವಾಗುತ್ತದೆ.

## ಸೆಂಟ್ರಲ್ ಕಾರ್ಡುದಾರರಿಗೆ ಆರೋಗ್ಯ ವಿಮೆ

ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ, ವೈಶ್ಯ ಬ್ಯಾಂಕ್ ಹಾಗೂ ಯುನೈಟೆಡ್ ಬ್ಯಾಂಕ್ ನೀಡುವ ಉದರಿ ಕಾರ್ಡ್ 'ಸೆಂಟ್ರಲ್ ಕಾರ್ಡು'ದಾರರಿಗೆ ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಕಡಿಮೆ ದರದಲ್ಲಿ ಆರೋಗ್ಯ ವಿಮೆ ಒದಗಿಸಲಿದೆ. ಸುಮಾರು ರೂ 61 ಸಾವಿರದ ವರೆಗಿನ ವಿಮಾ ಸೌಲಭ್ಯ ಕೇವಲ ರೂ. 640ಕ್ಕೆ ದೊರೆಯುತ್ತದೆ. ಹಾಗೂ ಪಾವತಿ ಮಾಡಿದ ವಿಮಾ ಶುಲ್ಕಕ್ಕೆ ವರಮಾನ ತೆರಿಗೆ ವಿನಾಯ್ತಿ ಉಂಟು.

## ನಗದು ಮೀಸಲು ಅನುಪಾತದಲ್ಲಿ ಹೆಚ್ಚಳ

30 ಜುಲೈ 1988ರಿಂದ ಪ್ರಾರಂಭವಾಗುವ ಪಕ್ಷದಿಂದ ಅನ್ವಯವಾಗುವಂತೆ ನಗದು ಮೀಸಲು ಅನುಪಾತವನ್ನು ಶೇ 10.5ರಿಂದ ಶೇ 11ಕ್ಕೆ ಏರಿಸಲಾಗಿದೆ. ಇದರಿಂದಾಗಿ ಒಟ್ಟು 630 ಕೋಟಿ ರೂ.ಗಳಷ್ಟು ಹಣವನ್ನು ರಿಸರ್ವ್ ಬ್ಯಾಂಕ್ ಹಿಡಿದಿಡಬಹುದೆಂದು ಒಂದು ಅಂದಾಜು. ಈ ಹಣಕಾಸು ವರ್ಷದ

ಮೊದಲ ಮೂರು ತಿಂಗಳಲ್ಲಿ ದ್ರವ್ಯದ ಹೆಚ್ಚಳ ಕಳೆದ ವರ್ಷದ ಇದೇ ಅವಧಿಗೆ ಹೋಲಿಸಿದಾಗ ಶೇ. 2ರಷ್ಟು ಹೆಚ್ಚಿರುವುದು ಎಂದು ಹೇಳಲಾಗಿದೆ.

## ಹಣಕಾಸು ಆಯೋಗ

9ನೆಯ ಹಣಕಾಸು ಆಯೋಗ 1989–90ರ ಅವಧಿಗೆ ಕೇಂದ್ರ–ರಾಜ್ಯ ಹಣಕಾಸು ವಿತರಣೆ ಬಗ್ಗೆ ತನ್ನ ಅಂತರಿಮ ವರದಿ ಸಲ್ಲಿಸಿದೆ.

## ಭಾರತೀಯ ಜೀವ ವಿಮಾ ನಿಗಮ

ತನ್ನ 32 ವರ್ಷಗಳ ವಯೋಮಾನದಲ್ಲಿ ಹಿಂದೆಂದೂ ಕಾಣದ ಶೇ. 32.2ರ ವ್ಯವಹಾರ ಪ್ರಗತಿಯನ್ನು ಭಾಜೀವಿ 1987_88ರಲ್ಲಿ ಸಾಧಿಸಿದೆ. 1987–88ರಲ್ಲಿ ರೂ. 12 ಕೋಟಿ ಮೌಲ್ಯದ 46.66 ಲಕ್ಷ ಪಾಲಿಸಿ ನೀಡಿದೆ.

## ಬೆಂಗಳೂರಿನಲ್ಲಿ ಸ್ವತಶ್ಚಲೀ ಷರಾಫ್ ಯಂತ್ರ

ವಿಜಯಾ ಬ್ಯಾಂಕು ಬೆಂಗಳೂರಿನ ಇಂದಿರಾ ನಗರ ಶಾಖೆಯಲ್ಲಿ ಸ್ಥಾಪಿಸಿದ 'ಸ್ವತಶ್ಚಲೀ ಷರಾಫ್ ಯಂತ್ರ'ದ ಮೂಲಕ ವಿದ್ಯುನ್ಮಾನ ಬ್ಯಾಂಕಿಂಗ್ ಯುಗ ಕರ್ನಾಟಕದಲ್ಲಿ ಆರಂಭವಾಗಿದೆ. ಈಗಾಗಲೆ ಸಿಟಿ ಬ್ಯಾಂಕ್, ಹಾಂಗ್‌ಕಾಂಗ್ ಬ್ಯಾಂಕ್ ಹಾಗೂ ಸರ್ಕಾರಿ ಕ್ಷೇತ್ರದ ಬ್ಯಾಂಕ್ ಆಫ್ ಇಂಡಿಯಾ ಮಹಾ ನಗರಗಳಲ್ಲಿ ಈ ಸೌಲಭ್ಯ ಒದಗಿಸಿದೆ.

## ಅಂಚೆ ಕಛೇರಿ ಮಾಸಿಕ ಆದಾಯ ಯೋಜನೆ

ಶೇ. 12ರ ದರದಲ್ಲಿ ತಿಂಗಳಿಗೊಮ್ಮೆ ಬಡ್ಡಿ ಪಾವತಿ ಮಾಡುವ ಅಂಚೆ ಕಛೇರಿ ಮಾಸಿಕ ಆದಾಯ ಯೋಜನೆಯಲ್ಲಿ ತೊಡಗಿಸುವ ಹಣದ ಗರಿಷ್ಠ ಮಿತಿಯನ್ನು ಹೆಚ್ಚಿಸಲಾಗಿದೆ. ಒಂಟಿ ಖಾತೆದಾರರು ಗರಿಷ್ಠ ರೂ. 12 ಲಕ್ಷವನ್ನು, ಜಂಟಿ ಖಾತೆದಾರರು ಗರಿಷ್ಠ ರೂ. 4 ಲಕ್ಷವನ್ನು ಈಗ ತೊಡಗಿಸ ಬಹುದಾಗಿದೆ.

## ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಫಲಾನುಭವಿಗಳಿಗೆ ವಿಮಾರಕ್ಷೆ

ಭಾರತೀಯ ಜೀವವಿಮಾ ನಿಗಮ 18 ಮತ್ತು 60ರ ನಡುವಿನ ವಯೋಮಾನದ ಸಗ್ರಾಹಕಾದ ಫಲಾನುಭವಿಗಳಿಗೆ ಜೀವವಿಮೆ ರಕ್ಷೆ ನೀಡಿದೆ. ಸುಮಾರು 40 ಲಕ್ಷ ಜನಕ್ಕೆ ಇದರಿಂದ ಪ್ರಯೋಜನ ದೊರೆಯಲಿದೆ. ಸ್ವಾಭಾವಿಕ ಮರಣಕ್ಕೆ ರೂ. 3,000 ಮತ್ತು ಅಪಘಾತದಿಂದೊದಗುವ ಮರಣಕ್ಕೆ ರೂ. 6,000 ಪರಿಹಾರ ದೊರೆಯಬಹುದು.

## ಕೃಷಿ ಉದರಿ ಕಾರ್ಡ್

ಕೃಷಿ ಕ್ಷೇತ್ರಕ್ಕೆ ಉದರಿಯ ಹರಿವನ್ನು ಚುರುಕುಗೊಳಿಸಲು ದೇನಾ ಬ್ಯಾಂಕ್ ನಂತೆ ಕೃಷಿ ಉದರಿ ಕಾರ್ಡ್‌ಗಳನ್ನು ನೀಡಬೇಕೆಂದು ಕೇಂದ್ರ ಸರ್ಕಾರ ಎಲ್ಲ ರಾಷ್ಟ್ರೀಕೃತ ಬ್ಯಾಂಕ್‌ಗಳಿಗೆ ಸೂಚನೆ ನೀಡಿದೆ.

## ಟ್ರೇಡರ್ ಬ್ಯಾಂಕ್ ವಿಲೀನ

ನವ ದೆಹಲಿಯ 'ದಿ ಟ್ರೇಡರ್ ಬ್ಯಾಂಕ್ ಲಿ' ಬ್ಯಾಂಕ್ ಆಫ್ ಬರೋಡ ದೊಡನೆ ವಿಲೀನಹೊಂದಿದೆ. ಸೂಚಿತ ಆಸ್ತಿ ಹಾಗೂ ಹೊಣೆಗಳ ಬ್ಯಾಂಕ್ ಆಫ್ ಬರೋಡಕ್ಕೆ ವರ್ಗಾಯಿಸಲ್ಪಟ್ಟಿವೆ.

## ಬಂಡವಾಳ ಲಾಭ ಖಾತೆ ಯೋಜನೆ 1988

ಬಂಡವಾಳ ಲಾಭದ ಮೇಲೆ ಕರ ವಿನಾಯಿತಿ ಪಡೆಯುವವರು ಇನ್ನು ಮುಂದೆ ಬಂಡವಾಳ ಲಾಭವನ್ನು ನಿರ್ದಿಷ್ಟ ಆಸ್ತಿಗಳಲ್ಲಿ ತೊಡಗಿಸುವುದರ ಮೊದಲು ತಮ್ಮ ವರಮಾನ ತೆರಿಗೆ ಪರತ ಮಾಹಿತಿ ಸಲ್ಲಿಸುವುದಕ್ಕೆ ಮುಂಚೆ ಸರ್ಕಾರಿ ಕ್ಷೇತ್ರದ ಬ್ಯಾಂಕುಗಳಲ್ಲಿ ಠೇವಣಿ ಇಡಬೇಕು. ಈ ಠೇವಣಿಗಳನ್ನು ಉಳಿತಾಯ ಖಾತೆ ಹಾಗೂ ಸಾಲದ ಠೇವಣಿ ಖಾತೆಗಳಲ್ಲಿಡಲು ಅವಕಾಶ ವಿದೆ. ಹಾಗೂ ಅವುಗಳಿಗೆ ಸಂಬಂಧಿಸಿದ ದರದಲ್ಲಿ ಬಡ್ಡಿ ದೊರೆಯುವುದು. ಈ ಯೋಜನೆ ಈ ವರ್ಷದ ಜೂನ್ 22ರಿಂದ ಜಾರಿಗೆ ಬಂದಿದೆ.

## ಗ್ರಾಮೀಣ ಉದ್ಯೋಗ ಯೋಜನೆಗಳ ವಿಲೀನ

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆ ಹಾಗೂ ಗ್ರಾಮೀಣ ಭೂರಹಿತರ ಉದ್ಯೋಗ ಖಾತರಿ ಕಾರ್ಯಕ್ರಮಗಳನ್ನು ಒಗ್ಗೂಡಿಸಲು ಸರ್ಕಾರ ನಿರ್ಧರಿಸಿದೆ. ಇದರಿಂದಾಗಿ ಇವುಗಳ ಅನುಷ್ಠಾನ ಹಾಗೂ ಉಸ್ತುವಾರಿ ಸುಲಭವಾಗಬಹುದೆಂದು ಆಶಿಸಲಾಗಿದೆ.

## ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ

ಕೇಂದ್ರ ಸರ್ಕಾರದ ಅಭಿವೃದ್ಧಿ ಇಲಾಖೆಯ ಕಾರ್ಯದರ್ಶಿಯನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯೊಂದು ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮವನ್ನು ಮತ್ತಷ್ಟು ಉತ್ತಮಗೊಳಿಸಲು ಹಲವು ಕ್ರಮಗಳನ್ನು ಸೂಚಿಸಿದೆ. ಫಲಾನುಭವಿಗಳಿಗೆ ಸಾಲ ನೀಡಲು ಈಗಿನ ಉದರಿ ಶಿಬಿರಗಳನ್ನು ಮುಂದುವರಿಸುವುದನ್ನು ಅನುಮೋದಿಸಿದೆ.

## ಬೆಳವಣಿಗೆ ಕೇಂದ್ರ : ಸಮಿತಿ ರಚನೆ

ಯೋಜನಾ ಆಯೋಗದ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಹಿಂದುಳಿದ ಕ್ಷೇತ್ರಗಳಲ್ಲಿ 'ಬೆಳವಣಿಗೆ ಕೇಂದ್ರ'ಗಳನ್ನು ಸ್ಥಾಪಿಸಿ, ಅಭಿವೃದ್ಧಿ ಪಡಿಸುವುದಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ಪರಿಗಣಿಸಲು ಸಮಿತಿಯೊಂದನ್ನು ಸರ್ಕಾರ ರಚಿಸಿದೆ.

## ವಿಶ್ವದ ಪ್ರಥಮ 500 ಬ್ಯಾಂಕುಗಳ ಪಟ್ಟಿ

ವಿಶ್ವದ ಪ್ರಥಮ 500 ಬ್ಯಾಂಕ್‌ಗಳ ಪಟ್ಟಿಯಲ್ಲಿ ಮೊದಲ 6 ಸ್ಥಾನಗಳನ್ನು ಜಪಾನಿನ ಬ್ಯಾಂಕ್‌ಗಳು ಪಡೆದಿವೆ. ಪಟ್ಟಿಯಲ್ಲಿರುವ ಜಪಾನಿ ಬ್ಯಾಂಕ್‌ಗಳ ಸಂಖ್ಯೆ 107, ಅಮೆರಿಕದ ಬ್ಯಾಂಕ್‌ಗಳ ಸಂಖ್ಯೆ 87. ಭಾರತದ 7 ಬ್ಯಾಂಕ್‌ಗಳು ಪಟ್ಟಿಯಲ್ಲಿ ಸ್ಥಾನ ಪಡೆದಿವೆ. ಅವುಗಳೆಂದರೆ ಭಾರತೀಯ ಸ್ಟೇಟ್ ಬ್ಯಾಂಕ್, ಭಾರತೀಯ ಕೈಗಾರಿಕಾಭಿವೃದ್ಧಿ ಬ್ಯಾಂಕ್, ಬ್ಯಾಂಕ್ ಆಫ್ ಇಂಡಿಯ, ಪಂಜಾಬ್ ನ್ಯಾಷನಲ್ ಬ್ಯಾಂಕ್, ಕೆನರಾ ಬ್ಯಾಂಕ್, ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ ಹಾಗೂ ಬ್ಯಾಂಕ್ ಆಫ್ ಬರೋಡ. 94ನೆಯ ಸ್ಥಾನದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕು, ವಿಶ್ವದ ಮೊದಲ ನೂರು ಬ್ಯಾಂಕುಗಳಲ್ಲಿ ಸ್ಥಾನ ಪಡೆದ ಏಕೈಕ ಭಾರತೀಯ ಬ್ಯಾಂಕ್ ಆಗಿದೆ.

## ವಿದೇಶಿ ಕರೆನ್ಸಿ ಅನಿವಾಸಿ ಖಾತೆ

ವಿದೇಶಿ ಕರೆನ್ಸಿ ಅನಿವಾಸಿ ಖಾತೆಯನ್ನು ಡಾಯಿಷ್ ಮಾರ್ಕ್ ಹಾಗೂ ಜಪಾನಿ ಯೆನ್‌ಗಳಲ್ಲಿ ವಿಸ್ತರಿಸುವುದರ ಜೊತೆಗೆ ಪ್ರತಿ ಕರೆನ್ಸಿಯ ಠೇವಣಿಗೂ ಬೇರೆ ಬೇರೆ ಬಡ್ಡಿ ದರಗಳನ್ನು ರಿಸರ್ವ್ ಬ್ಯಾಂಕ್ ಜಾರಿಗೆ ತಂದಿದೆ.

## ರಾಷ್ಟ್ರೀಯ ವಸತಿ ಬ್ಯಾಂಕ್

ಪ್ರಾಂತೀಯ ಹಾಗೂ ಸ್ಥಳೀಯ ಮಟ್ಟದಲ್ಲಿ ಉಳಿತಾಯ ಸಂಗ್ರಹಿಸುವ ವಸತಿ ನಿರ್ಮಾಣಕ್ಕೆ ಹಣಕಾಸು ಒದಗಿಸುವ ಸಂಸ್ಥೆಗಳನ್ನು ಪ್ರವರ್ತಿಸುವ ಹಾಗೂ ಅಭಿವೃದ್ಧಿಪಡಿಸುವ ಮೂಲ ಉದ್ದೇಶ ಹೊಂದಿರುವ ರಾಷ್ಟ್ರೀಯ ವಸತಿ ಬ್ಯಾಂಕ್ ಕಾರ್ಯಾರಂಭಮಾಡಿದೆ. ಅದರ ಪ್ರಧಾನ ಕಚೇರಿ ದೆಹಲಿಯಲ್ಲಿದ್ದು ಹಣಕಾಸು ಸಚಿವಾಲಯದಲ್ಲಿ ಹೆಚ್ಚುವರಿ ಕಾರ್ಯದರ್ಶಿಯಾಗಿದ್ದ ಕೆ. ಎಸ್. ಶಾಸ್ತ್ರಿಯವರು ವ್ಯವಸ್ಥಾಪಕ ನಿರ್ದೇಶಕರಾಗಿ ಆಯ್ಕೆಯಾಗಿದ್ದಾರೆ.

## ಬ್ಯಾಂಕು ಸಿಬ್ಬಂದಿ ವೇತನ ಪರಿಷ್ಕರಣೆ

ಕಳೆದ ಹದಿನೆಂಟು ತಿಂಗಳಿಂದ ನಡೆಯುತ್ತಿರುವ ಬ್ಯಾಂಕ್ ನೌಕರರ ವೇತನದ ಬಗೆಗಿನ ಮಾತುಕತೆಗಳು ಮುರಿದುಬಿದ್ದಿವೆಯೆಂದು ನ್ಯಾಷನಲ್ ಬ್ಯಾಂಕ್ ಎಂಪ್ಲಾಯೀಸ್ ಕಾನ್‌ಫೆಡರೇಷನ್ ಹಾಗೂ ಆಲ್ ಇಂಡಿಯಾ ಬ್ಯಾಂಕ್ ಎಂಪ್ಲಾಯೀಸ್ ಅಸೋಸಿಯೇಷನ್‌ನ ಪತ್ರಿಕಾ ಪ್ರಕಟಣೆ ತಿಳಿಸಿದೆ. ಎರಡು ಉದ್ಯೋಗಿ ಸಂಘಟನೆಗಳು ಹೋರಾಟಕ್ಕೆ ಕರೆಕೊಟ್ಟಿದ್ದು, ಪ್ರದರ್ಶನ, ಪ್ರತಿಭಟನೆ ಸೇರಿದಂತೆ ಒಂದು ದಿನದ ಮುಷ್ಕರಕ್ಕೆ ಕರೆ ನೀಡಿತ್ತು. ಅದರಂತೆ ಮುಷ್ಕರ ಬಹುತೇಕ ಯಶಸ್ವಿಯಾಗಿದೆ.

## ಭಾರತೀಯ ಸ್ಟೇಟ್ ಬ್ಯಾಂಕ್ ಸಂಪರ್ಕ ಜಾಲ

ಕೇಂದ್ರ ಕಛೇರಿ, ಸ್ಥಳೀಯ ಪ್ರಧಾನ ಕಛೇರಿ, ಪ್ರಾದೇಶಿಕ ಕಛೇರಿ ಹಾಗೂ ಮುಖ್ಯ ಶಾಖೆಗಳ ನಡುವೆ ಉಪಗ್ರಹದ ಮೂಲಕ ಶೀಘ್ರ ಸಂಪರ್ಕ ಜಾಲವೊಂದನ್ನು ಭಾರತೀಯ ಸ್ಟೇಟ್ ಬ್ಯಾಂಕ್ ರೂಪಿಸಿ ಆಚರಣೆಗೆ ತಂದಿದೆ. ಈ ಜಾಲದಿಂದ ತ್ವರಿತ ಸಂಪರ್ಕ ಸಾಧ್ಯವಿದ್ದು, ಬ್ಯಾಂಕಿನ ನಿಧಿ ನಿರ್ವಹಣೆಗೆ ಹೆಚ್ಚು ಉಪಯೋಗವಾಗುವುದರ ಜೊತೆಗೆ ಗ್ರಾಹಕಸೇವೆಯೂ ಉತ್ತಮಗೊಳ್ಳುವುದೆಂದು ಆಶಿಸಲಾಗಿದೆ.

**ನೇಮಕಾತಿಗಳು**

| | | |
|---|---|---|
| ಜಿ. ಎಸ್. ದಹೋತ್ರೆ | ಅಧ್ಯಕ್ಷ ಹಾಗೂ ವ್ಯವಸ್ಥಾಪಕ ನಿರ್ದೇಶಕರು | ದೇನಾ ಬ್ಯಾಂಕ್ |
| ಆರ್. ಸಿ. ಸುನೇಜ | —''— | ನ್ಯೂ ಬ್ಯಾಂಕ್ ಆಫ್ ಇಂಡಿಯ |
| ಕೆ. ಆರ್. ನಾಯಕ್ | —''— | ಆಂಧ್ರ ಬ್ಯಾಂಕ್ |
| ಎಂ.ಸಿ.ಕೆ. ನಾಯರ್ | ಅಧ್ಯಕ್ಷ/ಮುಖ್ಯ ಆಡಳಿತಾಧಿಕಾರಿ | ಫೆಡರಲ್ ಬ್ಯಾಂಕ್ |
| ಎನ್.ಡಿ. ಪ್ರಭು | ಅಧ್ಯಕ್ಷ ಹಾಗೂ ವ್ಯವಸ್ಥಾಪಕ ನಿರ್ದೇಶಕರು | ಕೆನರಾ ಬ್ಯಾಂಕ್ |
| ವಿ. ಆಟಲ್ | ವ್ಯವಸ್ಥಾಪಕ ನಿರ್ದೇಶಕರು | ಭಾರತೀಯ ಸ್ಟೇಟ್ ಬ್ಯಾಂಕ್ |



## ಬ್ಯಾಂಕ್ ಠೇವಣಿ ಮತ್ತು ನಾಮನಿರ್ದೇಶನ

### ಚಂದ್ರಮ್ಮ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ನಡುವಣ ವ್ಯಾಜ್ಯ

ತನ್ನ ಠೇವಣಿಗೆ ಇಬ್ಬರನ್ನು ನಾಮನಿರ್ದೇಶಿತರನ್ನಾಗಿ (ನಾಮಿನಿ) ಠೇವಣಿದಾರ ನಾಮನಿರ್ದೇಶಿಸಿದಾಗ (ನಾಮಿನೇಟ್) ಬ್ಯಾಂಕು ಅವರಿಗೆ ಠೇವಣಿ ಹಣ ಪಾವತಿ ಮಾಡಬಹುದೆ? ಎಂಬ ಪ್ರಶ್ನೆ ಈಚೆಗೆ ಅಲ್ಲಿಯ ಉಚ್ಚ ನ್ಯಾಯಾಲಯದಿಂದ ಇತ್ಯರ್ಥವಾಗಿದೆ (ಎಪಿಆರ್ 1988 ಸೆಪ್ಟೆಂಬರ್).

ಅಡಿವಪ್ಪ ಎಂಬವರು ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದಿನ ತಮ್ಮ ಉಳಿತಾಯ ಖಾತೆಗೆ ಒಂದು ಲಕ್ಷ ರೂಪಾಯಿಗಳನ್ನು ಜಮಾ ಮಾಡಿದರು. ತಮಗೆ ಮರಣ ಸಂಭವಿಸಿದಲ್ಲಿ ಸದರಿ ಹಣವನ್ನು ಪಡೆಯಲು ತಮ್ಮ ಇಬ್ಬರು ಪತ್ನಿಯರ ಹೆಸರುಗಳನ್ನು ನಾಮನಿರ್ದೇಶಿತರೆಂದು ನಮೂದಿಸಿದರು. ಅವರ ಮರಣಾನಂತರ ಆ ಇಬ್ಬರು ಪತ್ನಿಯರೂ ಹಣದ ಪಾವತಿಗಾಗಿ ಕೋರಿಕೆ ಸಲ್ಲಿಸಿದರು. ಬ್ಯಾಂಕ್ ಕಂಪನಿಗಳ ವಿನಿಯಮನ ಅಧಿನಿಯಮದ 42 2A ಪ್ರಕರಣದ ಅನ್ವಯ ಹಣ ಪಡೆಯಲು ಒಬ್ಬರನ್ನು ಮಾತ್ರ ನಾಮನಿರ್ದೇಶಿಸಬಹುದಾಗಿದೆಯಾದ್ದರಿಂದ, ಇಬ್ಬರ ನಾಮನಿರ್ದೇಶನದಿಂದ ಖಾತೆ ಕ್ರಮಬದ್ಧವಾಗಿಲ್ಲವೆಂದೂ, ತನ್ನ ಮಿತ್ರ ಬ್ಯಾಂಕ್ ಆ ಖಾತೆಯ ಇತ್ಯರ್ಥ ಮಾಡಲಾಗುವುದಿಲ್ಲವೆಂದೂ ಬ್ಯಾಂಕು ಹೇಳಿತು. ಆ ವಿಧವೆಯರು ಉಚ್ಚನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ಸದರಿ ಮೊಬಲಗನ್ನು ಪಾವತಿ ಮಾಡಲು ಬ್ಯಾಂಕಿಗೆ ಆದೇಶ ನೀಡಬೇಕೆಂದು ಕೋರಿದರು. ಇಬ್ಬರು ನಾಮನಿರ್ದೇಶಿತರನ್ನು ಸೂಚಿಸಿರುವ ಠೇವಣಿಯನ್ನು ಸ್ವೀಕರಿಸಬಾರದೆಂಬುದು (45 2A ಪ್ರಕರಣ) ಬ್ಯಾಂಕಿಗೆ ಆದೇಶವಾಗಿದೆಯೆಂದೂ, ಬ್ಯಾಂಕು ಈ ಆದೇಶವನ್ನು ಕಡೆಗಣಿಸಿದಲ್ಲಿ ಇಡೀ ವಹಿವಾಟೇ ಕಾನೂನುಬದ್ಧವಲ್ಲವೆಂದು ಪರಿಗಣಿಸಬಾರದೆಂಬುದು ಅದರ ಉದ್ದೇಶವಲ್ಲವೆಂದೂ ನ್ಯಾಯಾಲಯ ನಿರ್ಣಯಿಸಿತು. ಬ್ಯಾಂಕು ಠೇವಣಿಯನ್ನು ಸ್ವೀಕರಿಸಿ, ಹಲವು ವರ್ಷ ಆ ಹಣವನ್ನು ಬಳಸಿರುವುದರಿಂದ, ಠೇವಣಿದಾರರ ನಾಮನಿರ್ದೇಶಿತರಿಗೆ ಹಣ ಪಾವತಿ ಮಾಡಲು ನಿರಾಕರಿಸುವುದು ನ್ಯಾಯವಲ್ಲವೆಂದೂ ಅವರಿಗೆ ಹಣ ಪಾವತಿ ಮಾಡಬೇಕೆಂದೂ ನ್ಯಾಯಾಲಯ ತೀರ್ಪಿತ್ತು ಆದೇಶಿಸಿತು.

